# ಹೋಂ ರೂಲು



ಕೈಲಾಸಂ



- ಮಾಧವ ಸನ್ಸ್ -
ಮದರಾಸು — — ಬೆಂಗಳೂರು.
೧೯೪೪

# ಮುನ್ನುಡಿ

ನಾಟಕದ ಸ್ವರೂಪ, ಉದ್ದೇಶ, ಉಪಯೋಗಗಳನ್ನು ನಾನು ಪ್ರೇಮದ ಪ್ರಥಮ ಸಂಪುಟದ ದ್ವಿತೀಯ ಸಂಚಿಕೆಯಲ್ಲಿ ಸಂಕ್ಷೇಪವಾಗಿ ಸಮಾಲೋಚಿಸಿರುವೆನು. ಆಯಾ ಸಮಯದ ಸಮಾಜಸ್ಥಿತಿಯನ್ನು ಸರಿಯಾಗಿ ಸಂದರ್ಶಿಸಿ ವೈದಿಕ ಜೀವನದ ಸಮಗ್ರದರ್ಶನದ ಬೆಳಕಿನಲ್ಲಿ ಅದನ್ನಿತ್ತಿ ಬಂಧುರವಾಗಿ ಬೆಳಸುವುದೇ ನಾಟಕದ ನೋಟವಾಗಬೇಕು. ಈ ಉದ್ದೇಶಕ್ಕಾಗಿ ಉದ್ಯುಕ್ತವಾದ ನಾಟಕಗಳಲ್ಲಿಯೇ ಸಮಾಜ ಸಂಜೀವಕ ಶಕ್ತಿಯು ಸೇರುತ್ತದೆ. ಈ ಮಾತನ್ನು ನಮ್ಮ ಪುರಾತನರಂತೆ ಪಾಶ್ಚಿಮಾತ್ಯರೂ ಕೆಲಮಟ್ಟಿಗೆ ಕಂಡುಹಿಡಿದಿರುವರು. ಉದಯಾವಸ್ಥೆಯಲ್ಲಿರುವ, (Nascent Stage) ಈಗತಾನೇ ಅರಳುತ್ತಿರುವ, ಇನ್ನೂ ಬೆಳೆಯುತ್ತಿದ್ದ, ಸಂಸ್ಕೃತಿಯು ಮೊದಲೇ ಪರಿಪೂರ್ಣವಾದ ಪರಿಪಕ್ವವಾದ ಸಂಸ್ಕೃತಿಯ ಅಂಗಾಂಗಗಳನ್ನು ಪ್ರದರ್ಶಿಸಿ ಅದರ ಭಾಷ್ಯವನ್ನೇ ಬರೆಯುತ್ತಿರುತ್ತದೆ. ಪಶ್ಚಿಮದ ಸಂಸ್ಥೆಗಳು ನಮ್ಮ ಸಂಸ್ಥೆಗಳ ಟೀಕೆಗಳನ್ನು ಬರೆಯುತ್ತಿವೆ. ಗ್ರೀಕ್ಷರ-ಗೌರವ ಸ್ಥಿತಿಯಲ್ಲಿ ಪಶ್ಚಿಮದ ನಾಟ್ಯವೇದವು ಹುಟ್ಟಿ, ಷೇಕ್ಸ್ಪಿಯರನ ಸಮಯದಲ್ಲಿ ಶಕ್ತಿಗೊಂಡು, ಪ್ರಸ್ತುತಕಾಲದಲ್ಲಿ ಇನ್ನೂ ಪರಿಪುಷ್ಟವಾಗಹತ್ತಿದೆ. ಸಮಾಜ ಶಿಕ್ಷಣಕ್ಕೂ ಸಂಸ್ಕರಣಕ್ಕೂ ನಾಟಕವೇ ಕಾಮಧೇನು ಎಂಬುದನ್ನು ಅವರು ಕಂಡುಹಿಡಿದಿರುವರು. ಐರ್ಲಂಡದಂತಹ ಪಾರತಂತ್ರ್ಯ ಪಂಕದಲ್ಲಿರುವ ನಾಡಿನವರು ಸಹ ನಾಟಕದಲ್ಲಿಯೇ ರಾಷ್ಟ್ರ ಜಾಗೃತಿಯ ರಕ್ಷಾಮಣಿಯನ್ನು ನೋಡಿಕೊಂಡಿರುವರು. ನಾಟಕದಲ್ಲಿರುವ ಪ್ರಜಾ ಪ್ರೇರೇಪಕ ಪ್ರಭೂತ ಶಕ್ತಿಯನ್ನು ಸಂದರ್ಶಿಸಿ ಹುಚ್ಚನಂತಾಗಿ "All Ireland must walk the Stage — ಐರ್ಲಂಡದ ಜನಾಂಗವೆಲ್ಲ ನಾಟ್ಯ

ರಂಗವನ್ನೊಮ್ಮೆ ನೋಡಲೇಬೇಕು ” ಎಂಬುದಾಗಿ ಯೀಟ್ಸನು ಉದ್ಘೋಷಿಸಿದನು ಇದು ಪಶ್ಚಿಮದ ಮಾತಾಯಿತು.

ನಮ್ಮಲ್ಲಿಯೂ ನಾಟಕಗಳಿವೆ. ಆದರೆ ಅವುಗಳಲ್ಲೆಷ್ಟೋ ಇನ್ನೂ ನಾಟಕದ ನೈಜವನ್ನು ನೆರವೇರಿಸುವಂಥಾವುಗಳಾಗಿಲ್ಲ; ನಾಟಕದ ನಿಜವಾದ ಉದ್ದೇಶ ಉಪಯೋಗಗಳನ್ನು ಸಾಧಿಸುವಂತಹ ನಾಟ್ಯ ನಿರ್ಮಾಣ ಧರ್ಮವನ್ನೇ ನಾವಿನ್ನೂ ಪೂರ್ಣವಾಗಿ ಪಡಕೊಂಡಿಲ್ಲ. ಪ್ರಯೋಗಾವಸ್ಥೆಯಲ್ಲಿಯೇ ಇರುವೆವು ತತ್ವ, ಭಾಷ್ಯ, ಸಾಂಕೇತಿಕ, ಕಲಾಕೌಶಲ್ಯಗಳ ಕೇಂದ್ರವಾದ ನಾಟ್ಯವೇದವನ್ನು ನೇರ್ಪಡಿಸುವುದಕ್ಕಾಗಿ ದೇಶದಲ್ಲಿ ಕೆಲವೆಡೆಗಳಲ್ಲಿ ಕಲಾಭವನಗಳು (Art Academies) ಹೊರಟಿರುವುದೇನೋ ನಿಜ. ನಾಟಕ ಕಲೆಯು ತಡೆಯಿಲ್ಲದೆ ಮುನ್ನಡೆಯನ್ನು ಪಡೆಯಬೇಕಾದರೆ ನಾವೀಗ ಎರಡು ಮಾತುಗಳನ್ನು ಮರೆಯಬಾರದು ಹಿಂದಿನ ಹೆಚ್ಚಳವು ಇಂದಿನ ಹುರುಪಿಗಾಗಿ; ಪೂರ್ವದ ಚರಿತ್ರೆ, ಪ್ರಸ್ತುತದ ಚೈತನ್ಯಕ್ಕಾಗಿ. ಆದ್ದರಿಂದ ನಾವು ಸದ್ಯದ ಉತ್ಸಾಹ ಉಪದೇಶಗಳಿಗಾಗಿ ಮೊದಲು ನಮ್ಮ ನಾಟಕ ಸಂಸ್ಥೆಯ ಆಮೂಲಾಗ್ರ ಸಮಗ್ರ ಇತಿಹಾಸವನ್ನು ಪರಿಶೋಧಿಸಿ ಸಂಗ್ರಹಿಸಬೇಕು. ಇದ್ದು ಬಿದ್ದವರೆಲ್ಲ ಎದ್ದು ನಾಟಕ ಬರೆಯುವುದೆಂದರೆ ಬರೀಬುದ್ಧಿಗೇಡಿತನವು; ಅದೊಂದು ಹುಡುಗಾಟಿಕೆಯಾಗಬಾರದು. ನಾಟಕದ ಉಚ್ಚ ಉದ್ದೇಶ, ಆಶಯಗಳ, ಪ್ರಕಾಶದಲ್ಲಿ, ಈಗ ನಡೆಯುತ್ತಿರುವ ನಾಟಕಗಳನ್ನು ನಿದಾಕ್ಷಿಣ್ಯವಾಗಿ ವಿಮರ್ಶಿಸಿ ಆಕ್ಷೇಪಾರ್ಹವಾದವುಗಳಿಗೆ ಆಶ್ರಯ ಕೊಡದೆ ಅವುಗಳು ಬೆಳಕಿಗೆ ಬರದಂತೆ ನಿರ್ಬಂಧಿಸಬೇಕು. ಇದಕ್ಕೆ ಗಟ್ಟಿಮುಟ್ಟಾದ ಸಂಘಶಕ್ತಿಯು ಬೇಕಾಗುತ್ತದೆ. ನಾಟಕದ ಉಪಾಂಗಗಳಾದ ವಾಸ್ತುಶಿಲ್ಪ, ಚಿತ್ರ, ಸಂಗೀತ, ವಾಙ್ಮಯ ಮುಂತಾದ ಕಲೆಗಳು ಸಹ ಚೇತರಿಸಿ ಕಳೆಗೊಳ್ಳುವಂತೆ ಎಚ್ಚರವಿಡಬೇಕು. ಏಕೆಂದರೆ ನಾಟಕಾಭಿವೃದ್ಧಿಗೂ ಇವುಗಳ ಏಳ್ಗೆಗೂ ಅಂಗಾಂಗ ಸಂಬಂಧವಿದೆ.

ರಾಷ್ಟ್ರ ರಚನೆಯಲ್ಲಿ ನಾಟಕದ ಯೋಗ್ಯ ಮತ್ತು ಇಷ್ಟವಾದ ಪ್ರಯೋಜನವು ಆಗದಿರುವುದಕ್ಕೆ ಮುಖ್ಯವಾಗಿ ಸದ್ಯಕ್ಕೆ ಎರಡು ಕಾರಣಗಳುಂಟು. ಅದರಲ್ಲಿ ಬಡತನವು ಮೊದಲನೆಯದು. ಬಡವರನ್ನು ಕೆಣಕುವ ಕಳೆಗಳು ಕಳೆದುಹೋದರೂ ಕೇಡಿಲ್ಲ; ನಮ್ಮ ನಾಟಕ ಪ್ರದರ್ಶನಗಳ ಪ್ರಯೋಜನವನ್ನು ಪಡೆಯುವುದು ದರಿದ್ರರಿಗೆ ದುರ್ಲಭವಾಗಿದೆ. ಆದ್ದರಿಂದ ಅವರ ಅಳವಿನಲ್ಲಿಯೂ ಕೂಡ ಬರುವಂತೆ, ಅವರಿಗೂ ಸಿಲುಕುವಂತೆ, ನಾವು ನಾಟ್ಯ ಪ್ರಯೋಗಗಳಲ್ಲಿ ಸೌಲಭ್ಯವನ್ನು ಸೇರ್ಪಡಿಸಬೇಕು. ಬಡತನವೊಂದು ಬಂಧನವಾಗದಂತೆ ತಕ್ಕ ಏರ್ಪಾಡುಗಳನ್ನು ಮಾಡಬೇಕು. ಪುಸ್ತಕ ಭಾಷೆಗೂ ಪ್ರಚಲಿತ ಭಾಷೆಗೂ ಇತ್ತೀಚೆಗೆ ಬಹಳ ಬಿಡುತ್ತದೆ. ಆದ್ದರಿಂದ ಪಾಮರರಿಗೆ ಪ್ರಯೋಗ (show) ದಲ್ಲಡಗಿದ ಮಾತಗಳ ಪೂರ್ಣಲಾಭವಾಗುವುದಿಲ್ಲ. ಪೂರ್ವ ಜನರಿಗೆ ಇದರ ಪೂರ್ಣಪರಿಚಯವಿತ್ತು. ಈ ಮಾತಿನ ಮಹತ್ವವನ್ನರಿತೇ ಭಗವಾನ್ ಬದ್ಧನು ತನ್ನ ಧರ್ಮ ದುಂದುಭಿಯನ್ನು ಆ ಕಾಲದ ರೂಢಭಾಷೆಯಾದ ಪಾಲೀ ಭಾಷೆಯಿಂದಲೇ ಮೊಳಗಿಸಿದನು. 'ನಾಗಾನಂದ' ಮುಂತಾದ ತತ್ಕಾಲೀನ ನಾಟಕಗಳಲ್ಲಿ ತೋರುವ ಪಾತ್ರವಿಶೇಷಗಳ ಸಂಭಾಷಣಗಳೇ ಇದಕ್ಕೆ ಸಾಕ್ಷಿ.

ಅಶೋಕನು ಕಲ್ಲುಗಳಲ್ಲಿ ಕೊರೆದ ನೀತಿನೇಮಗಳೂ ಇದಕ್ಕೊಂದು ಆಧಾರ. ಅದಕ್ಕೂ ಪ್ರಾಚೀನ ಕಾಲದ ನಾಟ್ಯವಾಙ್ಮಯದಲ್ಲಿ ಕಂಡುಬರುವ ಪ್ರಾಕೃತ ಭಾಷೆಯೂ ಈ ಸತ್ಯವನ್ನೇ ಸಾರುತ್ತದೆ. ಬಂಗಾಲೀ, ಹಿಂದೀ ಮರಾಠೀ ಗುಜರಾಥೀ, ಮುಂತಾದ ಔತ್ತರೇಯ ವಾಙ್ಮಯಗಳಲ್ಲಿ ಈ ಭಾಷಾ ಭೇದವು ಅಷ್ಟೊಂದು ವಿಶೇಷವಾಗಿಲ್ಲ. ದಕ್ಷಿಣ ದೇಶದ ದ್ರಾವಿಡ ಭಾಷೆಗಳಲ್ಲಿ ಈ ಅಂತರವು ಸ್ಫುಟವಾಗಿ ಕಾಣುತ್ತದೆ. ಆದ್ದರಿಂದಲೇ ಉತ್ತರದವರು ನಮಗಿಂತ ಹಲವು ಸಂಗತಿಗಳಲ್ಲಿ ಹೆಚ್ಚು ಮುಂದುವರಿದಿದ್ದಾರೆ. ನಮ್ಮ ಸಾಹಿತ್ಯಗಳಲ್ಲಿ, ಭಾಷೆಯ ಬಾಬಿನಲ್ಲಿ, ಗದ್ಯ ಪದ್ಯಗಳಲ್ಲಿ ಗೆಳೆತನವೇ ಇಲ್ಲ. ಗದ್ಯ ಮತ್ತು ವ್ಯವಹಾರ ವಾಙ್ಮಯಗಳಲ್ಲಂತೂ ವಿಪರೀತ

ವಿಭೇದ. ಭಾವಾರ್ಥವನ್ನು ನಿರೂಪಿಸುವುದೇ ಭಾಷೆಯ ಬಲ; ಬುದ್ಧಿಯ ಬಲವನ್ನು ಬೆಳೆಸುವುದೇ ಭಾಷೆಯ ಭಾಗ್ಯ. ಭಾವವಿಲ್ಲದೇ ಭಾಷೆಯೆಲ್ಲಿಂದ ? ಆದ್ದರಿಂದ ಜನಜಂಗುಳಿಯಲ್ಲಿ ಭಾಷಾ ಸಂಸ್ಕಾರಕ್ಕಿಂತ ಮುಂಚೆ ಬುದ್ಧಿ ಸಂಸ್ಕಾರವನ್ನು ಉಂಟುಮಾಡಲೇಬೇಕು. ಆದರೆ ತಿಳಿಯದ ನುಡಿಯಿಂದ ತಜ್ಞತೆಯು ತಲೆದೋರುವುದೇ? ಯೂರೋಪ ಖಂಡದಲ್ಲಿ ಇಂದಿಗೆ ಅಜ್ಞ ಜನರ ನುಡಿಯಲ್ಲಿ ಬರೆದ ಪುಸ್ತಕಗಳಿಗೇ ಬೇಡಿಕೆ ಹೆಚ್ಚು. ಈ ಸಾಹಿತ್ಯಕ್ಕೆ (Cockney Literature) 'ಕೂಲಿಕಾರರ ವಾಙ್ಮಯ' ಎಂದು ಹೆಸರು. ಇದರ ಮಾರಾಟವು ಮಿತಿಮೀರಿ ಆಗುತ್ತದೆ. ಅಕ್ಷರ ಪರಿಚಯವಾಗಿ ಸಾಮಾನ್ಯ ಓದುಬರಹ ಬಲ್ಲವರಿಗೆ ವಾಙ್ಮಯವನ್ನು ಓದಿ ಜ್ಞಾನ ಸಂಪಾದಿಸಲು ಭಾಷಾ ಭೇದವು ಅಡ್ಡಕಟ್ಟುವ ಒಡ್ಡಾಗಿ ನಿಲ್ಲಬಾರದು. ತಮಿಳು ನಾಡಿನ ಬಡಬಗ್ಗರು ಜಗತ್ತಿನಲ್ಲೆಲ್ಲ ಕೂಲಿಕಾರರಾಗಿ ಇರಲಿಕ್ಕೆ ಅವರ ತಾಯ್ನುಡಿಯೇ ಒಂದು ಕಾರಣವು. ಅಂದಮೇಲೆ ಸುಸಂಕೃತ ಭಾಷಾಭಿವೃದ್ಧಿಯು ಉದ್ದೇಶವಾದರೆ ಜನತೆಯಲ್ಲಿ ಮುಂಚೆ ವ್ಯವಹಾರ ಭಾಷೆಯ ಮೂಲಕ ವಿಚಾರಗಳನ್ನು ಬೆಳೆಸಬೇಕು. ಆದ್ದರಿಂದ ಆದಷ್ಟು ಮಟ್ಟಿಗೆ ನಾಟಕಗಳನ್ನು ನಿತ್ಯದ ನುಡಿಯಲ್ಲಿಯೇ ಬರೆಯಬೇಕು. ಜನಜೀವನವನ್ನು ಚಿತ್ರಿಸುವಾಗ ನಾಟಕವು ಸ್ವವಿಮರ್ಶೆಯನ್ನು ಮಾಡುತ್ತದೆ. ಅರ್ವಾಚೀನ ಜನಜೀವನದೊಡನೆ ಸಾಸಿವೆಯಷ್ಟಾದರೂ ಸಂಬಂಧವಿಡದ ಪುರಾತನ ಪೌರಾಣಿಕ ಚರಿತ್ರಾಂಶಗಳಿಂದಲೇ ನಮ್ಮ ನಾಟಕಗಳು ನೇಯಲ್ಪಟ್ಟಿದ್ದರಿಂದ ಅವುಗಳು ಸಮಾಜ ಸಂಸ್ಕರಣದ ವಿಷಯದಲ್ಲಿ ಬಂಜೆಯಾಗಿಬಿಟ್ಟವೆ. ನಾಟಕ ಪ್ರಯೋಗಗಳ ಪ್ರಧಾನೋದ್ದೇಶವು ದುಡ್ಡು ದೊರಕಿಸುವುದಾದ್ದರಿಂದ ನೋಟಕರ ಅವನತ (Degarded) ಅಭಿರುಚಿಗಳಿಗೆ ಆಹಾರವೀಯುವುದೇ ನಾಟಕಕರ್ತರ ಗುರಿಯಾಗಿದೆ. ಉಪದೇಶಕ್ಕಾಗಿ (Enlighten-ment) ಉದ್ದೀಪನ (Excitement) ವಿರಬೇಕೆಂಬುದನ್ನು ನಾವು ಮರೆತುಬಿಟ್ಟಿರುವೆವು. ನಾಟಕ ನೋಡಿ ಹಿಂತಿರುಗಿ ಹೋಗುವ ಪ್ರೇಕ್ಷಕರು ತಮ್ಮ ಸ್ವಭಾವ ಶೋಧನೆಮಾಡಿ ದುರ್ಗುಣಗಳನ್ನು ದಬ್ಬಿ ಸದ್ಗುಣಗಳನ್ನು

ಸಂಗ್ರಹಿಸುವ ಬೋಧನೆಯನ್ನು ಹೊಂದುವಂತಿರಬೇಕು. ಅಂದರೆ ನಾಟಕ ಸಮಸ್ಯೆಯು ಲೋಕಸಂಗ್ರಹ ಸಹಾಯಕವಾಗುವುದು.

ಶ್ರೀ|| ಕೈಲಾಸಂ ಇವರ ನಾಟಕ ಪ್ರಹಸನಗಳು ಈ ವಿಚಾರಗಳನ್ನು ತಿಳಿಯಾಗಿ ಹೊಳೆಯುವಂತೆ ಸೂಚಿಸುತ್ತವೆ. ಪಂಡಿತ ಪಾಮರ ರಿಂದಲೂ ಪುರಸ್ಕಾರವನ್ನು ಪಡೆದ 'ಟೊಳ್ಳು ಗಟ್ಟಿ' ಯ ವಿಷಯವನ್ನು ಎಲ್ಲರೂ ಬಲ್ಲರು. ಪ್ರಸ್ತುತ ಪುಸ್ತಕವೂ ಒಂದು ಪುಟ್ಟ ಸಾಮಾಜಿಕ ಪ್ರಹಸ ನವು ಇದರಲ್ಲಿ ಅವರು ಸಮಾಜ ಸ್ಥಿತಿಯನ್ನು ಇದ್ದುದ್ದಿದ್ದಂತೆಯೇ ಪ್ರತಿಬಿಂಬಿಸಿರುವರು. ಆದರೆ ಇದ್ದ ಬಗೆಯನ್ನು ಬಣ್ಣಿಸಿ ಚಿತ್ರಿಸಿರುವುದರಲ್ಲಿ ಅವರು ಇರಬೇಕಾದ (Ideal) ಸ್ಥಿತಿಯನ್ನು ಮರೆತು ಮುಂದಿಯನ್ನು ಮುಂದುಗಾಣದಂತೆ ಮಾಡಿಲ್ಲ. ನಾಟಕದಲ್ಲಿಯೇ ಆದರ್ಶ ಜೀವನದ ಚೆಲುವನ್ನು ಚಮಕಿಸಿ ಸಾಧನಗಳನ್ನು ಸೂಚಿಸಿದ್ದಾರೆ.

ಹಾಸ್ಯದಲ್ಲ ಎಂತಹ ತೀಕ್ಷ್ಣ ಶಕ್ತಿಯು ಇದೆಯೆಂಬುದಕ್ಕೆ 'ಹೋಂ ರೂಲು' ಎಂಬ ಈ ಚಿಕ್ಕ ಪ್ರಹಸನವೇ ಒಂದು ಸಾಕ್ಷಿ.

ಸಮಾಜದ ಅಭಿರುಚಿಗೆ ಇಂತಹ ಪ್ರಯೋಗಗಳು ಒಗ್ಗುತ್ತವೆಯೋ ಇಲ್ಲವೋ ಎಂಬುದನ್ನು ನೋಡುವುದಕ್ಕೋಸ್ಕರ ಈ ನಾಟಕವು ಒಂದು ಸಮೂನೆ. ಓದುಗರಿಗೂ ನೋಟಕರಿಗೂ ಇದು ಸೊಂಪಾಗಿಯೂ ಸಮಂಜಸ ವಾಗಿಯೂ ಕಂಡುಬಂದಲ್ಲಿ ಇದೇ ಮಾದರಿಯ ಕೆಲವು ಪ್ರಹಸನಗಳನ್ನು ಬರೆಯಬೇಕೆಂದು ಶ್ರೀ ಕೈಲಾಸಂರವರ ಕೋರಿಕೆ.

ಗ್ರಂಥಕರ್ತರು ಮೈಸೂರು ಸೀಮೆಯ ರೂಢಭಾಷೆಯಲ್ಲಿ ಬರೆಯುತ್ತಿರು ವುದರಿಂದ ಅಖಿಲ ಕರ್ಣಾಟಕಕ್ಕೆ ತಿಳಿಯುವುದಿಲ್ಲ-ಆದ್ದರಿಂದ ಇದರಿಂದೇನೂ ಉಪಯೋಗವಿಲ್ಲೆಂದು ಕೆಲವರ ಆಕ್ಷೇಪ. ಮೊದಲು ತಮ್ಮ ತಮ್ಮ

ಪ್ರಾಂತದಲ್ಲಿ ಈ ಬಗೆಯ ಯತ್ನಗಳನ್ನು ಮಾಡಬೇಕೆಂಬುದೇ ಅದಕ್ಕೆ ಸಮಾಧಾನ. ಕೈಲಾಸಂ ಇವರು ಒಬ್ಬ ಮೇಲ್ಪಂಕ್ತಿ; ಒಂದು ಕಿತ್ತಿ. ಉತ್ತಮವೂ ಉಚಿತವೂ ಎಂದು ತೋರಿದರೆ, ಅದನ್ನು ಕನ್ನಡಿಗರೆಲ್ಲರೂ ತೀಡಬೇಕು

ತುಂಗಭದ್ರಾ — ತಾರಾನಾಥ.

ಪುಷ್ಯ ಶು॥ ೧ ಶಕೆ ೧೮೪೬



# HOME RULEಉ

ಅಥವಾ

# ಹೊರಗಿನ ಹುಲಿ ಮನೇಲಿಲಿ
# ಮುಂಕ್ಮುಬ್ಚೋ ಹೆಣ್ಣು ಮನೆತನಕ್ಮ್ರಣ್ಣು

ಅಥವಾ

# ಪಾರ್ಲಿಮೆಂಟ್ ಕೊಟ್ರೊ ಪತ್ನಿ ಕೊಡಳು

**ಮೈದಾನದ ಹೆಬ್ಬುಲಿ : ಮನೆಯ ಮೂಗಿಲಿ**

" ಸಾಭಾರ್ಯಾಯಾಗೃಹೇದಕ್ಷಾ "

—ಸ್ತ್ರೀ ಸೂಕ್ತ

# ಪಾತ್ರಗಳು

**ರಾಮಣ್ಣ** :— ರಾಮಪುರದ ಲಾಯರು; ಮುನಿಸಿಪಲ್ ಕೌನ್ಸಿಲರ್; Social Reform ಸಂಘದ ಪ್ರೆಸಿಡೆಂಟ್; ಸನಾತನ ಧರ್ಮ, ವರ್ಣಾಶ್ರಮ ಧರ್ಮ, ಪ್ರಜಾಪ್ರತಿನಿಧಿ ಸಭೆಗಳ ನಾಮಿನೇಟೆಡ್ ಮೆಂಬರು; ಕಾಂಗ್ರೆಸ್ ಮೆಂಬರು; ಸ್ಮಾಲ್ ಕಾಸ್ ಕಮಿಷನರು; **ದ್ವೈತಾದ್ವೈತಿ.**

**ವೆಂಕಮ್ಮ** :—ಈತನ ದ್ವಿತೀಯ ಪತ್ನಿ.

**ಸುಬ್ಬಮ್ಮ** :—ಈತನ ಮುದಿತಾಯಿ; ವಿತಂತು.

**ಬೋರ** :—ಜವಾನ

**ನಾರಾಯಣ** :—ಅಡಿಗೆಯವನು

**ಸಾವಿತ್ರಮ್ಮ** :—ಮತ್ತೊಬ್ಬ ನೆರೆಯ ಮುದಿ ವಿತಂತು.

ಸ್ನೇಹಿತರುಗಳು

**ಸ್ಥಾನ** :—ರಾಮಪುರ.

**ಕಾಲ** :—ಆಧುನಿಕ.

**ಭಾಷೆ** :—ಆಧುನಿಕ ಸಾಮಾಜಿಕ

ಈ ರೂಪಕದಲ್ಲಿ ಬರುವ ಪಾತ್ರಗಳೆಲ್ಲವೂ ಸಮಾಜದಲ್ಲಿ ಕಂಡು ಬರುವವಾಗಿದ್ದರೂ
ಯಾವ ಒಂದು ವ್ಯಕ್ತಿಯನ್ನೂ ಸೂಕ್ಷಿಸಿ ಬರೆದದ್ದಲ್ಲ.

# ಹೋಂ ರೂಲು

---

## ದೃಶ್ಯ : ಮೊದಲನೆಯದು

**ಸ್ಥಾನ :** ರಾಮಪುರದ ಒಂದು ಬೀದಿ.

[ ಸುಬ್ಬಮ್ಮನು ಬಲದಿಂದ ಎಡಕ್ಕೆ ಬರುತ್ತ ಎಡದಿಂದ ಬಲಕ್ಕೆ ಬರುವ ಮತ್ತೊಬ್ಬ ವೃದ್ಧಳನ್ನು ಸಂಧಿಸುವಳು. ]

**ಸುಬ್ಬಮ್ಮ**:—ಹತ್ತಿರದಲ್ಲೆಲ್ಲಾದ್ರೂ ಆಳ್ವಾದ ಭಾವೀ ಇಥೆಯೇ?

**ಎದುರಾಕೆ**.—ಆಳ್ವಾದ ಭಾವೀ! ........ ಹತ್ತರ ನೀರಿದ್ರಲ್ಲವೇ ಅನುಕೂಲ .... .... ಸೇದೋಕೆ ನೀರ್ನ ....?

**ಸುಬ್ಬಮ್ಮ**:—ಚೆನ್ನಾ ........ ಆ ........ ಯ್ತು! ಅಸುರಸಂಧಿ ಕೂಡೋ ವೇಳೇಲೀ ದಿಂಬು ಚೊಂಬು ಕೈಲಿಲ್ದೆ ನೀರ್ಸೇದೋಕ್ಹೊರ್ಟೇಂತಿ ಳ್ಕೊಂಡ್ರಾ?

**ಎದುರಾಕೆ**.—ಮತ್ತಿನ್ಯಾಕೆ ಹುಡುಕ್ತಿರೋದು ಭಾವೀ? .... .... ಅಲ್ದೆ .... ಆಳ್ವಾದ ಭಾವೀ!

**ಸುಬ್ಬಮ್ಮ**:—ಒಳಗೆ ಬಿದ್ದೂ ಉ ........ ಪ್ರಾಣಗಳ್ಬಿಡೋಕೆ ........ ಪಂಚ ಪ್ರಾಣಗಳ್ನಾ ........ ಬಿಟ್ಟೇಬಿಡೋಕೆ. ನೀರು ಹತ್ತಿರಗಿತ್ತರಿದ್ರೆ ಮೂರುಸರ್ತಿ ಮುಳುಗಿ ಮುಳುಗಿ ಸಾಯೋಷ್ಟ್ರಲ್ಲೇ ಯಾವ

ಪ್ರಾಣಿಯಾದ್ರೂ ಹೊರಗೆಳ್ಕೊಳ್ಳ್ಯಾನೂಂಬೋ ಭಯಾ ಇರೋದಿಲ್ಲ ...ಆಳ್ವಾದ ಭಾವೀಲಿ.

**ಎದುರಾಕೆ**:—ಇದೇನು ಹುಚ್ಚು, ಸುಬ್ಬಮ್ಮನೋರೇ? ಅಯೋಧ್ಯೆ ಎಲ್ಲಾ ಶ್ರೀರಾಮನ್ನ ಹೊಗಳ್ಕೊಳ್ಳಿಗೆ ರಾಮಪುರಕ್ಕೆಲ್ಲಾ ಅಣ್ಣ ರಾಮಣ್ಣನಾಗಿ ಹೊಗಳಿಸ್ಕೊಳ್ಳೋ ನಿಮ್ಮಗನ ಅಂತಸ್ತನ್ನೂ ಐಶ್ವರ್ಯಾನೂ ನೋಡ್ತಾ ಆ ಪರಮಾತ್ಮ ನಿಮ್ಮಕಣ್ಣು ಮುಚ್ಕೋವರಿಗೂ ಆನಂದ ಪಡತಾ ಇರೋದ್ಬಿಟ್ಬಿಟ್ಟೂ ಭಾವೀಲ್ಬಿದ್ದು ಸಾಯ್ಬೇಕೂಂತೀರಲ್ಲಾ . . . . ಇದೇನ್ಹುಚ್ಚೂ?

**ಸುಬ್ಬಮ್ಮ**:—ಒಳ್ಳೇ ಅಯೋಧ್ಯೇ! ಒಳ್ಳೇ ರಾಮಚಂದ್ರ! ... ಇದೇನು ಸಾವಿತ್ರಮ್ಮನೋರೇ .... .... ನಮ್ಮನೆ ಸಂಸಾರದ ಗಲಾಟೆಯ ಸರ್ವಾಂಶಾನೂ ತಿಳ್ದೂನೂ ಇನ್ನಾನೂ ಇಹಲೋಕದಲ್ಲಿ ಆನಂದಪಡೋ ಒಂದಂಶಾ ಬೇರೆ ಬಾಕಿ ಇಥೆಯೋ ನಮ್ಮನೇಲಿ ... ನನ್ನ ಎರಡನೆ ಸೊಸೆ ವಕ್ರಿಸ್ಕೊಂಡ್ಕೂತಿರೋವಾಗ?

**ಸಾವಿತ್ರಮ್ಮ**:—ಹೌದೂ....ಊ? ನಿಮಗೂ ನಿಮ್ಮ ಸೊಸೇಗೂ ಏನಾದರೂ ಅನನ್ಯೋನ್ಯಗಳು ಉಂಟಾದ್ರೇ ... ಅವಳ್ಗಂಡ .. ನಿಮ್ಮಗ ... ರಾಮು ನಿಮ್ಮಕ್ಕಡೇಸೇ ಅಲ್ವೇ .? . . ತಾಯೀ ಕಡೆ .. ..... ಹೆತ್ತ ತಾಯೀ ಕಡೇ?

**ಸುಬ್ಬಮ್ಮ**:—ದೇಪ್ರೇ೯೯ ಗತಿ! ನಮ್ಮ ರಾಮೂ ........ ನೀವ್ಹೇಳ್ದ ಈ ಅಭಿನವ ಶ್ರೀರಾಮ .... .... ಹೆತ್ತಾಯೀನ್ಬಿಟ್ಬಿಟ್ಟಿದ್ದಲ್ದೆ ಅವಳ ಕಡೇ

ಸೇಕೊರ್ಂಡೂ ಅವನ್ಮಾಯೀ ಮೆದೇಗೇ ಕವೆಗೋಲ್ನಾಗೆ ಕುತ್ಗೀ ಬಿಗೀತಿಥಾನೆ .... .... !

**ಸಾವಿತ್ರಮ್ಮ**:—ಇನ್ನೇನ್ಗತೀೀ .... ?

**ಸುಬ್ಬಮ್ಮ**.—ಗತಿಯೇನು.. ಗೊತ್ತೀ ಇಥೆ. ನಮ್ರಾಮೂ ನನಗೆದುರು ನಿನ್ತ್ಕೊಲಿ . ಶ್ರೀರಾಮು ಕಪ್ಪೆ ಮೇಲಿ ಕೈಯಿತ್ತಿ ಆ ಪ್ರಾಣಿಗಾದ ಗತೀನೇ .ನನ್ಗೂ ವೆ.

**ಸಾವಿತ್ರಮ್ಮ**:—ಶ್ರೀರಾಮು ! ಕಪ್ಪೆ ಮೇಲಿ ಕೈಯಿತ್ತಿದ್ನೆ ? ಹ್ಯಾಗೆ? ಯಾವಾಗ ?

**ಸುಬ್ಬಮ್ಮ**: —ಯಾವಾಗೇನೂ ಊ? ...ತ್ರೇತಾಯುಗ ... ದಾಶರಥೀ .... ದಂಡಕಾರಣ್ಯ .. .... ದಾಹ. ದೂರದಲ್ಲಿ ಕಂಡ ಸರಸ್ಸಿನ ಕಡೆ ಸರಸರಾಂತ ಕಾಲ್ಹಾಕ್ತಾನೇರಿ, ಬಿಲ್ಲಿನ್ನ ಬಿನಾಟು ಹೆಗಲಿಗ್ತಗ್ಲ್ಹಾ ಕ್ಕೊಂಡಿದ್ದ ಬತ್ತಳಿಕೇನೂ ಇಳೀಬಿಟ್ಟು, ಕೈಯ್ಯಿಂದ್ಬೊಂದ್ಬಾಣಾನ ಕಕ್ಕಬ್ಡದ ನೆಲಕ್ಕೆ .... ಇನ್ನಿಳ್ದು ಪುಷ್ಕಳವಾಗಿ ಪಾನಾಮಾಡಿ ಮೇಲ್ಬಂದು ಸೇರಿ ನೋಡ್ತಾನೆ ಆ ಪತೀತ ಪಾವನಾ .... .... ತನ್ಬಾಯಾರ್ಕೇ ಗಡಿಬಿಡೀಲೀ ಬಡಮುಕುಕ್ದ್ಬಾಣಾ ಒಂದು ಕಪ್ಪೇನ್ನೂ ಭೂದೇವೀನ್ನೂ ಎಡ್ನೂರ್ ಪೋಣಿಸ್ಕೊಂಡು ನೆಟ್ಕೊಂಡಿಥೆ! ಬಂತೂ ರಾಮನಿಗೆ ಜ್ಞಾನ! ... ತಾನು ಯಾರು ? .... .... ತಾನು ಇಹಲೋಕಕ್ಕಿಳಿದವ್ಯಾಕೇ ? ಇಹಲೋಕ ತನ್ನ ಕರಸಿಕೊಂಡವ್ಯಾಕೆ ? .... .... ಆವಪ್ಪಾಂಥವಾಂತ್ಗೊಗಳಿಸ್ಕೊಳ್ಳೋ

ತಾನು ತನ್ನ ದಾಹದವಸ್ಥೇಲಿ ತಾನು ಬಾಣಾನ ಕುಕ್ಕಿದ ತನ್ನ ಕೊಬ್ಬಿನ ಜೋರಿಸಿಂದ ಜೀವಹಿಂಸೆ ಒಂದ್ ಸಾಧುಜಂತೂಗೆ ಸಂಭವಿಸಿ, ಜಗತ್ತಿನ ಹಾಸ್ಯಕ್ಕೆ ಗುರಿಯಾದ್ನೆಲ್ಲಾಂಬೋ ತನ್ನೋಷ್ಟಲ್ಲಿ ಆ ಕಪ್ಪೇನ್ನೋಡಿ "ಎಲ ಮಂಕೆ! .... .. ನಾನು ಬಾಣಾನ ಕುಕ್ಕೋಕೆ ಕೈಯೆತ್ತಿದಾಗ ನನ್ನ ನೋಡೋಕೆ ಕಣ್ಣುಗಳ್ನೂ 'ನಾನಿಲ್ಲಿಧೇನೇ'ಂತ ಅರಚೋಕೆ ಬಾಯೂನೂ ನನ್ನ ಮಗ ಬ್ರಂಪ್ಮ ನಿನಗ್ಕೊಟ್ಟಿರೋವಾಗ, ಹುಚ್ಚುಮುಂಡೇ ಹಾಗೆ ಅವನ್ನೆಲ್ಲಾ ಮರತು ನನ್ಕೈಯಿಂದ್ಕುಕ್ಕಿಸ್ಕೊಂಡು ನರಳ್ತಿಧೀಯಲ್ಲಾ....! ಈಗ 'ಅಹಿಂಸಾ ಪರಮೋಧರ್ಮಃ'ಂಬೋ ವೇದವಾಕ್ಯಾನ, ಕಪ್ಪೇ ರಕ್ತಾನ ಸುರಿಸಿದ್ನಾನೂ, ಹ್ಯಾಗೆ ಪ್ರಚುರ ಪಡಿಸೋದ್ಪ್ರಪಂಚಕ್ಕೇ"ಂದ. ಅವನ ಪ್ರಶ್ನೆ ಅದಕ್ಕಿಲ್ಲದ್ಕಿವೀಗ್ಬಿದ್ದು .... .... ಬಂತೂ ಒಂದ್ಕಡೇ ಕೋಪ; "ಹುಚ್ಚುಮುಂಡೇ" ಅಂದ್ನ ಲ್ಲಾಂತ! ಇನ್ನೊಂದ್ಕಡೆ ಬೆನ್ನಿಂದ್ಹೊಕ್ಕು ಎದೆಯಿಂದ್ಹೊರ್ಟಿರೋ ಬಾಣದಿಂದಾದ ತಾಪ! ತನಗಿಲ್ಲದ್ದಂತಾವಕೀನ ಕಟಕಟ್ನೆ ಕಡೀತಾ ಆ ಇರಿದ ಬಾಣಾ ಬಿಟ್ಟ ಅಲ್ಪಸ್ವಲ್ಪ ಅವಕಾಶದಲ್ಲಿ ಕುತ್ಗೀನ್ನಿರುಪ್ಕೊಂಡು ಕೋಪದಿಂದ್ಹೇಳತ್ತಾ ಕಪ್ಪೇ .. "ರಾಮಾ! ಮೊದಲ್ನಿನ್ನೀ ಹಾಳ್ಬಾಣಾನ್ಕೀಳೂಊ, .... .... ಆಮೇಲೆ ಹೊಂದುಸ್ತೇನೆ ನೀನ್ಹೇಳಿದ್ದನ್ಯಾಯಾ'' ಅಂತ. ಇವೇನೋ ಏನೋ ಕಾಣೆ ಆ 'ಕೋಪಮಂಡೂಕನ್ಯಾಯಾಂ'ತಾರಲ್ಲಾ ಅದು! — ಕುಗ್ತಾ ಕಿತ್ತ .... ಬಾಣಾನ .... ರಾಮ. .... ರಕ್ತ ಪ್ರವಾಹ .. . ಸುಸ್ತು .... ಪ್ರಾಣೇ. ........ "ಸ್ವಲ್ಪಿರು ........ ಸುಸ್ತಾಗಿಧೇನೆ; ಸುಧಾರಿಸ್ಕೊಂಡು, ಸಂಭಾಷಿಸ್ತೇನೆ

ಆಮೇಲೇ ”ಂತು ಪ್ರಾಣಿ. ಸುಧಾರಿಸ್ಕೊಂಡ್ಮೇಲೆ ಗದ್ಗದ ಸ್ವರದಿಂದ ಮೊರೆಯಿಡತ್ತೆ ಆ ಮಂಡೂಕ, ... ... “ಅಯ್ಯೋ ರಾಮಾ! ನಾನು ಹುಟ್ಟಿದಾರಭ್ಯ ಹದ್ದುಗಳಾಗಲೀ ಹಾವುಗಳಾಗಲೀ ... .... ಇಲ್ಲಾ . .. ಕಲ್ಲೆತ್ಕೊಂಬರೋ ಹುಡುಗರಾಗಲೀ ಹತ್ತಿರ ಬಂದಾಗೆಲ್ಲಾ ‘ಹರಿ ಹರೀ! ಹಾರಾಮ! ಪಾಹಿಪಾಹೀ’ಂತ್ಕಿರಲ್ಲಿದ್ದ ನಾನೂ, ... ಶ್ರೀರಾಮನೇ ನನ್ನ ಮೇಲೆ ರಾಮಬಾಣಾನ ಎತ್ತಿ ಕುಕ್ಕೋಕುದ್ಯುಕ್ತನಾದಾಗ, ಏನೂಂತಕಿಲೋರ್ಲದೂ”ಂತ ಬಿಡ್ತು ಪಂಚಪ್ರಾಣಗಳ್ನ! ಹಾಗೇ ೯ ೯ ನನ್ನ ಮಗ, ರಾಮೂ, ಸೀತೆ ಹಾಗಿದ್ದ ಮೊದಲನೇ ಹೆಂಡ್ತಿ ಸತ್ತ ಮೇಲೆ ಈಗ ಬಂದಿರೋ ತಾಟಕಿ ಜೊತೇಲಿ ಕೈ ಜೋಡಿಸ್ಕೊಂಡು ಕುಣೀತಿರೋವಾಗ .... ಗಂಡಸ್ಕಳ್ಕೊಂಡಿಪನ ತಾಯಿ .. ಕೌಸಲ್ಯೆ .... ನನ್ಗತೀಯೋನೂ ... .. ಆಕ್ಷ್ವಾದ್ಯಾವಿ ಇಥೆಯೆ? .. ... ಹತ್ರದಲ್ಲಿ?

**ಸಾವಿತ್ರಮ್ಮ**:—ಹಯ್ಯೋ ಸುಬ್ಬಮ್ಮನೋರೇ! ಕತ್ತಲೇನೋ ಕವೀತಾ ಬಂತೂ. ಇನ್ನಾಳ್ಹಾದಭಾವೀ ಹುಡುಕೋವ್ರಲ್ಲಿ ಕಣ್ಣುಕಾಣದೇ ಎಡವಿಬಿದ್ದು ಕಾಲಿಗೆ ಪೆಟ್ಟಾದೀತೂಊ! ಈಗ ಸಧ್ಯ ಮನೇಗ್ಹೋಂತಿಗ್ಹೋರ್ಗಿ, ಮಗನಿಗೆ ಹೇಳೋದ್ನೆಲ್ಲಾ ಹೇಳಿ, ಇನ್ನೂ ಕೇಳ್ದೆ ಮೂರ್ಖನಾಗಿದ್ದಪಕ್ಷಕ್ಕೆ ಮುಂದಿನ ಕ್ರಮಾನ ನಾಳೇ ಮಧ್ಯಾಹ್ನ ನಮ್ಮನೇಲಿ ತೀರ್ಮಾನಿಸೋಣಾ .... ಬನ್ನಿ! ಬನ್ನಿ!

[ ಸುಬ್ಬಮ್ಮನನ್ನು ಕರೆದುಕೊಂಡು ಬಲಗಡೆ ನಿಷ್ಕ್ರಮಣ. ]

———

## ದೃಶ್ಯ: ಎರಡನೆಯದು

### ಸ್ಥಾನ :—ರಾಮಪುರದ ಮತ್ತೊಂದು ಬೀದಿ.

[ ಮೂರು ವ್ಯಕ್ತಿಗಳು ನಡುಬೀದಿಯಲ್ಲಿ ನಿಂತು ಸಂಭಾಷಿಸುತ್ತಿರುವರು. ]

**ರಾಯ** :—ಇವೇನ್ರಯ್ರೀ . .... ರಾಮಣ್ಣೋರು ಕೊಟ್ಟ lectureಊ ನಿಮಗೆ ಸರಿಬೀಳ್ದಿದ್ರೇ ಅಲ್ಲೇ ಪ್ರಶ್ನೆ ಹಾಕಿ ಸಂದೇಹ ನಿವೃತ್ತಿ ಮಾಡ್ಕೊಳ್ಳೋದ್ಬಿಟ್ಟೊ, ಇಲ್ಲೀಗ ನಡ್ರಸ್ತೇಲಿ ನಮ್ಹತ್ರ ಗೋಳಾಡೇನ್ಸ್ವಾಮೋಜ್ನ ?

Iyeru :—ಪುಂಗಹತ್ರ ನಾನೇನೂ ಕೋಳಾಡಂ ಪಣ್ಣಲಿಲ್ಲ. . .... ರಾಮಣ್ಣಾವರ್ . . .... ತೊಟ್ಟವ್ರಾತ ಮೇಲೇ ಉಟಿಕೀರುಕು ಮತುವೆ ಪಣ್ಣಲೇಣ್ ಪೇಕು ; .... ಕೊರಪಟ್ಟವರ್ಕ್ಕು .... ಅಂತರೆ ಅಂಮ್ಮಯಾಂ . ಶತ್ತು ಓದವರ್ಕ್ಕು... ತಿರಂಬಿ ಮತುವೆಮಾಟಲೇಣ್ ಪೇಕೂ ಅನೀ ಹೇಳಿದ್ರೇ ಅಲ್ಲತೇ .... ನಂಬ ಮನೆಕಳಲ್ಲಿ ಪೊಮ್ಮಾಂ ಡಾಟಿಗಳ permission ಸಿಕ್ಕವ ತಾರಿ ಶೋರಿಸಲಿಲ್ಲ. Lecture Hallಲ್ಲಿ ಕೇಳಿತರೋ, ಪೆರೀಯ ಹುಲಿಯಾಟ್ಮ ಒಡಂಬು ಮೇಲೆ ಪಿತ್ತು ಬಿಡುತ್ತಾರೆ ! ಇಲ್ಲಿ, ಇಲ್ಲಿ ರೋಟಿನಲ್ಲ ಪರುವಾಗ ಮೂಲೇಲಿ ನಾವು ಮೂಣು ಜನಂಗ್ಳು ಮುತ್ತಿಕ್ಕೊಂಡು ಮಾತಾಡಬೇಕೂಅನ್ ಕಾತುಕೊಂಡಿತೇನೆ.

**ರಾಯ** :—ಅರ್ಥವಾಯ್ತು. ....ಹಾಗಾದ್ರೆ ನನ್ನೊ ಸಂಸಾರದಲ್ಲಿ ಹೆಂಗ್ಸ್ರು ಹದ್ದು ಹೆಚ್ಚು. ...... . ಪ್ರೌಢವಿವಾಹ .... ವಿತಂತು ಪುನರ್ವಿವಾಹ

ಇವುಗಳ್ಗೆ ಮನೆಯುವರ್ನ ಒಪ್ಸೋಬಗೆ ನನ್ಗೂ ಸ್ವಲ್ಪ ಹಾಗ್ಹಾಗೆ. .... ನಿಮ್ಗಾಗೆ ಸಾನೂವೆ ರಾಮಣ್ಣೋರು ಇಲ್ದಾಸ್ಹೋಗೋವಾಗ .... ನಿವೃತ್ತಿ ಮಾಡ್ಕ್ಯೋತೇನೆ. .... .... ಹೌದೂ ! ನಿಮಗ್ಕನ್ನಡ ಗೊತ್ತಿಲ್ಲ ..? ...

Iyeru :—( ಅಡ್ಡಮಾತಾಗಿ ) ನನಕ್ಕು ಕನ್ನಡಂ ಕೊತ್ತು !

**ರಾಯ** :—ಒಪ್ಪೆ ! . ಅದ್ರೂವೆ ರಾಮಣ್ಣೋರು ಕರ್ಣಾಟಕರೂ,........ ಕವ್ಮ್ರೇಗ್ಳೂ.. .ಅವರ್ಗೆ ನಿವ್ಕನ್ನಡ ಮುಂದಟ್ಟಾಗೋದಿಲ್ಲ.

Iyeru :—ಅತುಪರ್ವಾ ಇಲ್ಲಾ. ನನಕು ಕನ್ನಡಂ ಕೊತ್ತಿಲ್ಲ .... .... ಕೊತ್ತಿಲ್ಲಾನ್ನಾ ಮೈಸೂರು ಕನ್ನಡಂ ... .... ಶುತ್ತ ಕನ್ನಡಂ ಕೊತ್ತಿಲ್ಲಾ ; ಇಂದ ನಮ್ಮ Iyengarಕೂ, ನನ್ನ ಇಂದ ಪಾಷೆಯೂ ಕೊತ್ತು . ಉಂಗ ಕನ್ನಡಮುಂ ಕೊತ್ತು. ಎನ್ನ Iyengarರ್ರೇ ! ರೊಂಡೂಂ ........ ಪುರಿಯಿವೋನ್ನೋ........ ಉಂಗ್ಳುಕ್ಕೂ ?

Iyengar :—ತೆರಿಂಚಿಕ್ರುದು ತೆರಿಂಚಿಕ್ರುದು ..... .. ಉಂಗ್ಡೆ ವಾರ್ತೇನೂ ತೆರಿಂಚಿಕ್ರುದು....ಇವಾಳ್ಳೆಟ್ಟ ವಾರ್ತೇನೂ ತೆರಿಂಚಿಕ್ರುದು ; ಎಂಗ್ಡೆ ವಾರ್ತೇಲೆ ಉಂಗ್ಡೆರೆಂಡ್ವಾರ್ತೇಯುಂ ಈವಾಳಂಡೆ ವಾರ್ತೇಯೂ ವರ್ರು .... ( ನೇಪಥ್ಯವನ್ನು ಗಮನಿಸಿ ) ಅಕೋ ಪಾಜರ್ೋ ! ರಾಮಣ್ಣಾವಾಳ್ .... ಎಳ್ಳಿಕ್ರಾರು ಇರ್ದ್ವಕ್ರೆ.

**ರಾಮಣ್ಣ** :—[ ಪ್ರವೇಶಿಸಿ.. .ರಸ್ತೆಯ ಜಲ್ಲೀ ಕಲ್ಲೊಂದನ್ನು ಎಡವಿ ಪೆಟ್ಟಿಂದ ದಕ್ಷಿಣವಾದವನ್ನು ಎತ್ತಿಕ್ಕೊಂಡು, ವದನವಲ್ಲಿ ವಿಷಾದವನ್ನು ವ್ಯಕ್ತಿಸುತ್ತಲೂ ಪೆಟ್ಟು ತಪ್ಪಿಸಿಕೊಂಡ ವಾಮಪಾದದಲ್ಲಿ ತಾಂಡವ ಮೂರ್ತಿಯಂತೆ ಪೆಟ್ಟಿನವಸ್ಥೆಯಲ್ಲಿ ಕುಣಿಯುತ್ತಲೂ ] ಹಾಳು ಕಂಟ್ರಾಕ್ಟ್ workoo! ....ರೋಡುದ್ದಕ್ಕೂ ಜಲ್ಲಿ! ನನ್ನ new rulesoo Municipaliteeಲಿ ಚಾಲ್ತೀಗೆ ಬರೋವರ್ಗೂ . ಇನ್ನೆಲ್ಲು ದಿವ್ಸದಲ್ಲಿ ನವ್ರಾಂಪುರ . . .. ಸರ್ವಾಂಗರಹಿತ–ಜನಭರಿತ–ಪುರವಾಗೋದ್ರಲ್ಲೀನೂ ಸಂದೇಹವೇ ಇಲ್ಲ.

[ ಎಂದು ನಡುರಸ್ತೆಯಲ್ಲಿ ನಿಷಣ್ಣನಾಗಿ, ಪೆಟ್ಟಿನ ಮೇಲೆ ಉಸಿರು ಊದಿ ಬಾಧೆಯನ್ನು ಶಮಿಸುತ್ತಿರುವನು. ]

**ರಾಯ** :–[ ಸಮೀಪಿಸಿ ] ಅದೇನು ಹೊಸ Rulesoo ರಾಮಣ್ಣೋರೆ?

**ರಾಮಣ್ಣ** :—ಓಹೋ! ನಿಮುಗ್ತಿಳೀದೇನೂ? ಇಲ್ಕೇಳಿ!

[ ಕಿಸೆಯಿಂದ ಕಾಗದವನ್ನು ಹೊರಪಡಿಸಿ ಓದುತ್ತಾ ]

Suggestions of conditions controlling the eligibility of intending candidates for councillorship at the ensuing municipal elections with further suggestions of conduct and procedure of the local Corporation after afore-said election :—

i. "Each candidate for Councillorship must already possess a street lamp before his house."

ರಾಯರು :— ಇದ್ಯಾಕಸ್ವಾಮಿ .... .... point ಏನು ?

ರಾಮಣ್ಣ :—Pointಏ? ಕೇಳಿ! —"This is to save the tax-payer from future Certain Expenses.—
ii. If and when elected, no two Councillors may reside in the same street locally."

Iyeru :—ಇತೂ ಎನ್ನತ್ಕ್ಕೆ ?

ರಾಮಣ್ಣ :—[ ಓದುತ್ತಾ ] —"This is to guarantee to the tax-payer at least as many cleankept streets in our City as there are Councillors in our Corporation.—
iii. Each Councillor must be presented with a Gold Medal for every occasion that a Great personage arrives in the City, that he is *not* present on the occasion. —This is to ensure the *bona fides* of the purpose of the candidate in seeking election.—"

ಹ್ಯಾಗಿಧೆ? . . ಇನ್ನೂ ಕೇಳಿ? . . . ಕೊನೇದು!

"iv. Free quarters must be provided for the President and irrespective of his owning a private palace or mansion it must be insisted that he resides in those quarters selected in the dirtiest parts of the City, . . and as the surroundings of these quarters get clean and sanitary he will be shifted to other temporary quarters in the other dirty parts of the City." ಅಯ್ಯೋ! ಇನ್ನೊಂದೇ ಒಂದು.

v. "The day after the election *a la* the Lord-Mayor's Show of London, a procession of the new President and Councillors must be arranged for with a view for them to realize the nature and the extent of the work before them; and hence the venue of the procession will be selected from the worst-kept roads and least sanitary quarters of the City. It is incumbent upon the municipal body-corporate that

they should negotiate the procession without shoes on their feet and bags over their noses; the latter to allay a local rumour that blind people in our city do not find their failing in their way of their getting about the City if their noses are functioning efficiently!" ...... . ಹ್ಯಾಗಿವೆ, rulesoo? ಇವುಗ್ಳ್ನಾನಾಚಾರೀಗ್ಬಂದ್ಬಿಟ್ರೀ ... ... ... .... ನಮ್ಮ್ರಾಮ್ಪುರ್ದ್ದಿದುರ್ಗೆ ಕುಚೇರನ್ನಟ್ಟ ಕೊಂಪೆ! . ....ಕೊಂಪೆ! ... ... ಹೌದೂ ಊ? ಅರ್ಥವಾಗ್ಲಿಲ್ಲ....ನೀವೆಲ್ಲಾ ನಡ್ರಸ್ತೇಲಿ ಹೀಗ್ನಿಂತ್ಕೊರ್ದ್ದಿರೋದು!

**ರಾಯ**. — ಏನೂ ಇಲ್ಲಾ; ತಮ್ಲೆಕ್ಚರು attendಮಾಡ್ಬಿಟ್ಟು ಮನೇಗ್ಬರ್ತಾ ನಮ್ನಮ್ಮಲ್ಲಿ ಹುಟ್ಟಿದ ಸಂದೇಹಾನಾ ತೀರ್ಸ್ಕೊಳ್ಳೋ ಸಂವಾದ್ದಲ್ಲಿ ತಾವೂನೂ ಬಂದ್ಬಿಟ್ರಿ.

**ರಾಮಣ್ಣ** :—ಅದೇನ್ಸಂದೇಹಾ? .... .... ನಾನು ತಕ್ಕಷ್ಟ್ಗೆ definite ಅನ್ನಾನೇ ಹೇಳ್ದೆ ನನ್ ideas ನಾ? ....... ಸಂದೇಹಕ್ಕೆಲ್ಲಿ ಅವಕಾಶ?

**ರಾಯ** :—ನೋಡೀ! ನೀವೇನೋ ಸಮಾಜ ಸುಧಾರಣೇಗೂ .... .... ನಮ್ದೇಶ್ದೇಳ್ಗೇಗೂ .... post puberty marriageಊ ....

widow re-marriageಊ ಐವೆರ್ಡೂ ಅಗ್ಲೇ ಬೇಕೂಂತ ಅಂದ್ಬಿಟ್ರೇ ಹೊರ್ತು . . . ನಮ್ಪುರಾಣೇತಿಹಾಸಗಳಲ್ಲಿ ಯಾವ ಭಾಗಗಳ್ನ ಮರ್ತ್ರೂನೂವೆ, "ನಾಭಾರ್ಯ ಯೋಗ್ಯಹೇದಕ್ಷಾ" ಅಂತನ್ನೋ ಮಹಾಭಾರತೋಕ್ತೀನಾ ಮೇಲ್ಪಂಕ್ತೀ ಹಾಕ್ಕೊಂಡಿರೋ ನಮ್ಮನೆ ಆಕೆಗಳೂ ಮಕ್ಕಳ್ನೂ ಒಪ್ಪೋವರ್ಗೂನೂ, ಗಂಡ್ಸಂಡಸ್ರೂ ತಮ್ lectureಗಳಲ್ಲಿ ನಿಮ್ಮಹರ್ನಿಮ್ಕೊಂಡ ಠರಾವ್ಗಳ್ಗೆ ಮನೇ ಹೆಂಗಸ್ರೂ "ಹೂ" ಮುದ್ರೆ ಒತ್ತಿದ್ರುತಾನೇ ಜಾರೀಗೆ ಬರೋದು social reform resolutionನ್ನಗಳೂ ?

**ರಾಮಣ್ಣ** :— ಕ್ಷಮ್ಸಿ! ... ನಿಮ್ಸಂನಾರಾ ಜರಗ್ಸೋಬೇಕ್ಮಪ್ರೆ ನಿಮ್ಮನೇ ಹೆಂಗ್ಸ್ರು ಕೈಯ್ಲಿರೋದು, ನೀವು ಮೂ ಡ ಯಿ ಂ ದ್ಮ ಟ್ಗೆ masculine ಆಗಿರೋದು, ನಿಮ್ಮುಪ್ಪಲ್ಲಿ lecture ಕೊಟ್ಟ ನನ್ತಪ್ಪಲ್ಲಾ . . ಕೋಪಿಸ್ಕೋಬೇಡಿ. ನಿಮ್ daughterಗೆ ten ಆಗ್ತಾ ಬಂತು. ನೀವು ಮನುಷ್ಯರಾಪ್ರೆ ಗಂಡ್ಸಾದ್ರೆ .... ಪ್ಶೈನರಿದ್ದೋಲೀನೆ ಮಡ್ಗೆ ಮಗಳ್ಗೇಂತ ಮುಸ್ಕರಾ ಹಿಡ್ದು ಸಾಧ್ಸಿ ನಿಮ್ಪಹಿಂನಾ! ಅವಾಗ "ನೋಭರ್ತುಯೋಗ್ಯಹೇದಕ್ಷಃ"ಂತ ಭಾರತ ಭಾರತಾನೆ ತಳ್ಳಿಕ್ಕೊಡಿ .... .... ಭರತ್ಮಾತೆ ಮಾನಾನ ಬಚಾಯಿಸ್ದ ಹಾಗಾಗುತ್ತೆ !

**ರಾಯ** :—ಒಪ್ಡೇ ಸ್ವಾಮಿ ! . . ಒಪ್ದೆ! .... ... .... ಮನೆ ಯಜ್ಮಾನ ಗಂಡ್ಸೂಂತಂದ್ರೂನೂವೆ, ತಂದೆ ... ಇಲ್ಲ ತಾಯಿ, .... ಇವರ ಮಾತ್ನ ಎತ್ಹಾಕ್ಕೊಡ್ದಂತಿರೋವ್ರುಗತೀ ಏನು!? ನೋಡೀ!

Post-puberty marriageನಲ್ಲಿ ನನಗ್ನಂಬ್ಕೆ ಇದ್ರೂನೂವೆ, ಎಪ್ಪತ್ತ್ವರ್ಷ ತುಂಬಿದ್ನಮ್ಮಜ್ಜಿ ಹತ್ತ್ವರ್ಷ ಕೂಡ ತುಂಬದ ನಮ್ ಪಾತೂ ಮದ್ವೇನ ಈ ವರ್ಷವೇ ನೋಡ್ಬಿದ್ರೆ .... ಛಾವೀಲ್ಬುಡ್ಮಿಕ್ಕಿ ನಾಯ್ಬೋನೇಂತ ಕೂತಿದ್ದಾಳಲ್ಲಾ, ಇದಕ್ಕೇನ್ಮಾಡೋದ್ನಾನು ....?

**ರಾಮಣ್ಣ** : Ri-di-cu lous! ಇದೇ ಹೆಂಗಸ್ರ ಹೆದ್ರಿದ ಗಂಡ್ಸದಿರ್ಗೆ, ಹೆಂಡ್ತಿಗಳೂ ಅಮ್ಮಗ್ಳೂ ಅಜ್ಜಿಗ್ಳೂ ಆಡೊ ತುರುಫ್ಗ್ಳಾನು .... .... "ಬಾಯ್ಬಿಟ್ರೆ ಛಾವೀಲ್ಬೀಳ್ತೀನೇ"ಂತ. ... ತುರುಫಿನ್ಮೇಲ್ತುರ್ಫು! ಮನೇ ಛಾವೀ ಮುಚ್ಚೀ, ನಲ್ಲಿ ಇಡೀ ನೀರಿಗೆ.

Iyeru :—ಅತು ಒಗೋದೆಲ್ಲಾ ಸ್ವಾಮೀ! . .... ತೊಟ್ಟವ್ರಮಾತು ಚಿನ್ನವರ್ಗೂ ಕೇಳವೇಕ್ಗೂ ಅಂಬೋದ್ಗೂ institution ಆಗಿಹೋಗುತ್ತೆ, Indian ಮನೆಕಳಲ್ಲೀ!

**ರಾಮಣ್ಣ** :—Such institutions must be broken .... .... uprooted!

Iyeru :—ಅತು impracticable ಸ್ವಾಮಿ! .... ... ಈಕ ನೋಡಿ! ರಾ ಜಾ ಮ ರ ಂ ನಾ ಚಿಕ್ಕದಾಕಿರೋವಾಕಾ ಮಕ್ಕಳು ಕೂಡ ಪಿಚ್ಚಿಹಾಕಬಹುತು . ... ತೊಟ್ಟತಾತ ಮೇಲೆ ಒಂದು institutionಆಗಿ ಓಗುತ್ತದೆ .... ರಾಜಾಮರಂ.

**ರಾಮಣ್ಣ** :—"ರಾಜಾಮರಂ"! ಅದೇನ್ಮರಾ?

Iyeru :—ಮರ್ಂ .... ತೊಟ್ಟಮರ್ಂ . .. . .. ಹೆಂಗಸರು ಶುತ್ತಿ ಶುತ್ತಿ ಬರುವತು ... ಪ್ರತಕ್ಷಣೌಂ ಮಾಡುವತ್ .... .... ನಮಸ್ಕಾರ ಮಾಡುವತು . .. ಮಕ್ಕಳು ಉಟ್ಟುವತು . . ರಾಜಾಮರಂ !

Iyengar :—ಇದೇನದ್ಭುಥೋಃಂ ! ಪಸದ್ಲುಪರ್ಶ್ಯಕ್ರಮರ್ನಾ ! .... ....
ಅದೆನ್ಮಾದ್ರಿಮರಂ ?

Iyeru :—ಎನ್ನಾ ? ಪರ್ಕರಮರಮಾ ? ಎನ್ದ ಭಾಷೇನ್ನೆನಚಿಂಡಿಕ್ರೆಳ್, ನೀಂಗೋಃ ?

Iyengar :—ತಮ್ಮೊನ್ನೂ ನೆನಚ್ಕೊಂಡಿಕ್ರೇನು .... ನಾನು.

Iyeru :—ನೆ ನ ಚಿ ಂ ಡಿ ಕ್ರ ೯ ಬಾಷೆಯೆ sunlight soap ತೇಃಚಿ ಕಶಕ್ಕಿಬಣತ್ಂಗೋಃ .... ... !
[ ರಾಮಣ್ಣನಿಗೆ ] ಇಲ್ಲಿ ನೋಃಟೇಃ ! ... ... ಎನಕ್ ಕನ್ನಡಂ ಕೊತ್ತಿಲ್ಲಾ ........ ನಿಮಕು tamil ಕೊತ್ತಿಲ್ಲಾ ........ ಇಂತ Iyengarಕೂ ರೊಂಡು ಷಾಷೆಯ್ಂ ಕೊತ್ತಿಲ್ಲಾ .... .... ಅಲ್ಲತೆ ಕೊತ್ತಿಲಾಸ್ಂ ಕೊತ್ತಿಲ್ಲಾ .... .... ನಿಮ್ಮ ಕನ್ನಡ ವಾಷೆಕಿ ತೋಃಲಿಯುರಿಚ್ಚಬಾಳಿ ಅಣ್ಣ್ಣನ್ ನಿಮ್ಮ ಹೆಸರು ! ಎಂಗ ವಾಷೇಕಿ ಮೋರ್ .... ಮಚ್ಚಿಕೆ ಉಳೀನ್ನ್ ಎಂಗಪೇರು. ಇಂತ Iyengarಉ ಬಾಷೆ .... .... .... ಓಂಗ ಬಾಳೀ ಅಣ್ಣು ಎಂಗ ಮೋರುಳ್ ಉಳೀಲೆ ಪೆಶಂಚ್ಂ ತಿನ್ನುವ ವಾಷೆ! .... .... ಈಕ ನಾವು ಆಟುವ ಮಾತು post puberty marriage ........widow re-marriage. ಮನೆ ಹೆಂಗಸರ ಮಾತಿನ

ಮೇಲೆ ಮರ್ಯಾತೆ ಇರ್ರ್ಕರ ನಮ್ಮ ಕಳ್ಕ್ಕೆ ನಿಮ್ಮ Idealistic lecturoo .. ..... ಪ್ರಯೋಚನವೇ ಇಲ್ಲ.

**ರಾಮಣ್ಣ** :—[ ಪಟಾಟೋಪದಿಂದ ] ಪ್ರಯೋಜನ್ನಿಲ್ಲಾ ! Of course ಪ್ರಯೋಜನ್ನಿಲ್ಲ ನಿಮಗೆ ! .... .... ನಾನ್ಕೊಟ್ಟ lecturoo ನಿಮಗಲ್ಲಾ .... . ಹೆಂಗಸರಗ್ಬದರ್ಕೊಂಡಿರೊ ಹೇಡಿಗಳ್ಗಲ್ಲಾ ! .. .....ಹೋಂ ರೂಲೂ, .... Home Ruloo, ಅಂತ ಹೇಳ್ತಾ Homeನಲ್ಲಿರೋ ಹೆಂಗಸರ್ಕೈಲಿ ಜುಟ್ನೂ ಮಿಾಸೇನೂ ಕೊಟ್ಬಿಟ್ಟು ಕಂಗೆಡೋ ಕ್ರಿಮಿಗಳ್ಗಲ್ಲಾ ಕೊಟ್ಟಿದ್ದು ನಾನು,........ ನನ್ lectureನಾ !........

[ ಕನಿಕರ ದೃಷ್ಟಿಯಿಂದ ಮೂವ್ವರನ್ನೂ ಈಕ್ಷಿಸಿ ] ಹಯ್ಯೋ ! .... .... ಸಿಂಮ್ಹಾದಲ್ಹೋಗಿ ಸ್ವರಾಜ್ಯ ಸ್ವರಾಜ್ಯಾಂತ ಸೀತ್ಕಾರ ಮಾಡೋ ಸಿಂಹಗಳೂ .... .... ಮತ್ಮಾರ್ಗ ರೈಲ್ಹತ್ತತ್ಲೂನೂವೇ ತೋಳಗ್ಳೂ ... . .. ತಮ್ಕೇರ್ಗೆ ಕಾಲ್ಹಾಕೋವಾಗ ಕತ್ತೆಗ್ಳೂ ....ಇನ್ಮ್ಯಿಬೀದೀಗ್ಬರುತ್ಲೂನೂವೆ ಬೆಕ್ಕುಗ್ಳೂ ಆಗಿ, ಇನ್ನನ್ನೇ ಹೊಸಲ್ದಾಟತ್ಲೂನೂವೆ ಮನೆ ಆಕೇಗೆ ಬೆದರ್ಕೊಂಡು .... .... ಮೂಲೇಲ್ಮುದರ್ಕೊಂಡು .... ಮೂತಿ ಮುಚ್ಕೊಳ್ಳೋ ಮೂಗಿಲಿ ಗಳ್ರಾ!! ನಿಮಗಲ್ಲಾ .... ನಾನ್ಕೊಟ್ಟ ನನ್ನ lecturoooo!! ಗಂಡಸರ್ಗೆ!! .... .... ಗೈರತ್ತಿರೋ ........ ಗಂಡಸರ್ಗೆ !!

[ **ಹೋರಾಡಿ ಗೆದ್ದ ಹುಂಜದಂತೆ ಹೆಜ್ಜೆಯನ್ನು ಹಾಕುತ್ತಾ, ಹಿಗ್ಗುತ್ತಾ ರಾಮಣ್ಣನು ಹೊರಡುವನು.** ]

**ರಾಯ** :—[ ಬೆಚ್ಚಿಬಿದ್ದು—ರಾಮಣ್ಣನು ಹೋದ ಹಾದಿಯನ್ನು ಸಭಕ್ತಿ ಭೀತಿಯಿಂದ ಅವಲೋಕಿಸುತ್ತಾ ] ಕ್ಷಮ್ಸಿ ಸಾರ್! ಈ ಪ್ರಾಣಿ! .... ಮಹಾಪ್ರಾಣಿ! ನಮ್ಮಂಥಾ ಗಂಡಸ್ರಗುಂಡ್ಗೇನೆ ಕುಗ್ಗಿಸಿ ಕರಗ್ಸೋವಾಗ ... .... ಈ ಹೆಬ್ಬುಲಿ ಘರ್ಜನೇನಾ .... .... ಈತನ್ಮನೇ ಹೆಂಗಸ್ರು ಹ್ಯಾಗ್ತಾನೇ ಸಹಿಸಿ ಬದುಕ್ತಾರ್ರ್ಯೋ ಕಾಣೆ. ಬನ್ನಿ ಹೋಗೋಣಾ .... .... ನಮ್ಮನಪ್ಪಣೇ ಬರ್ಹೋವ್ವೇ .... .... ಮನೇಲಿ, ಸಾಭಾರ್ಯಾಯಾಗೃಹೇದಕ್ಷಾ!

[ ನಿ ಷ್ಕ್ರ ಮ ಣ ]

---

## ದೃಶ್ಯ : ಮೂರನೆಯದು

**ಸ್ಥಾನ :**—ರಾಮಣ್ಣನ ಮನೆಯ ಮುಂದಿನ ಕೋಣೆ.

**ರಾಮಣ್ಣ :**—[ ಪ್ರವೇಶಿಸಿ, ಕೋಣೆಯ ಹೊರ ಹೊಸಲನ್ನು ದಾಟಲುದ್ಯುಕ್ತಳಾಗಿರುವ ತಾಯಿಯನ್ನು ಕುರಿತು ] ಅದ್ಯಾಕಮ್ಮ ಹೀಗ್ನಿಂತಿಧೀಯಾ ?

**ಸುಬ್ಬಮ್ಮ :**—ಅದೇ ನನಗೂ ಆಶ್ಚರ್ಯ ! ನಿಮ್ಮಪ್ಪನ್ನ ಸ್ಮಶಾನದಲ್ಲಿ ಸುಟ್ಟು ಬೂದಿ ಮಾಡಿದ್ಯಲ್ಲಾ, ಅವನ್ಸುಟ್ ಚಿತೇ ಮೇಲೆ ಎರಡು ಬೆಟ್ಟಗ್ಲವಾದರೂ ಸ್ಥಳ ಬಿಟ್ಟಿದ್ರೆ ಅದರ ಮೇಲೆ ಬಿದ್ದುಕೊಂಡು ಬೂದಿಯಾಗಬೇಕೂ ಅಂತಿದ್ದ ನನಿಗೇ, ಹಸುಮಗುವಾಗಿದ್ದ ನಿನ್ನ ಸಾಕೋಕೇ ಅಂತ ನಿಮ್ಮಪ್ಪ ಕಟ್ಟಿಟ್ಟು ನಮ್ಮಿಬ್ಬರ್ನೂ ಬಿಟ್ಟಿಟ್ಟು ಹೋದ ಈ ಮನೇಲಿ .... .... ಆ ಮೊದಲನೇ ಮಾರಿ ಸತ್ತದ್ದಕ್ಕೆ ಸಾಯೋವರಿಗೂ ಸಂತೋಷಪಟ್ಕೊಂಡು ಸುಮ್ನಿರದೇ, ಬೇಡ .... ಬೇಡ .... ಬೇಡ .... ಅಂತ ಬಡ್ಕೊಂಡ ನನ್ಮಾತನ್ನೆತ್ತ್ಯಾಕಿ ಈ ಎರಡನೇ ಕಿರಾತಕೀನಾ ಕೈ ಹಿಡಿದು ಮನೆಗೆಳಕೊಂಡ್ ಬಂದಾರಭ್ಯ ಮುಳ್ ಮುತ್ತುಗದ ಮರದ ಮೇಲ್ನ .... .... ಭೇತಾಳ್ನ್ಹಾಗೆ ಸೂರಿಗೆ ಕಾಲು ನೆಲಕ್ಕೆ ತಲೆಯೂ ಆಗಿ ತೂಗಾಡೋದು ಬಿಟ್ಟು ಸರ್ವರ ಹಾಗೆ ಹೀಗೆ ನೆಟ್ಕೊಂಡು ನಿಂತಿರೋಕೆ ನನಗೆಲ್ಲಿ ಯೋಗ್ಯತೆ ಬಂತೂಂತ, .... .... ನನಗೂ ಅದೇ ಆಶ್ಚರ್ಯ !!

**ರಾಮಣ್ಣ** :—ಅಮ್ಮಾ ! ಅಪ್ಪ ದಿವಂಗತನಾದಾಗ,

" ತಿಸ್ರಃ ಕೋಟ್ಯೋರ್ಧ ಕೋಟೀಚ ಯಾನಿರೋಮಾಣಿ ಮಾನವೇ ।
ತಾವತ್ಕಾಲಂ ವಸೇತ್ಸ್ವರ್ಗೇ ಭರ್ತಾರಂ ಯಾನುಗಚ್ಛತಿ ॥ "

ಎಂಬ ಪುರಾಣೋಕ್ತಿ ಪ್ರಕಾರ ಅಪ್ಪನ್ ಜತೇಲಿ ಸ್ವರ್ಗಸುಖಗಳ್ನೆಲ್ಲಾ ಅನುಭವಿಸೋದ್ನ ಬಿಟ್ಟ್‌ಬಿಟ್ಟು ......." ಆತ್ಮಾ ವೈ ಪುತ್ರನಾಮಾಸೀ " ಅಂತ, ಅಪ್ಪನೇ ನಾನು ಅಂಬೋ ಭಾವದಿಂದ ಈ ನನ್ನ ಬೆಳಸಿದ ನೀನು ಈ ವಯಸ್ಸಿನಲ್ಲಿ ನನ್ನ ಕಣ್ಣೆದುರ್‌ಗೆ ಹೀಗೆ ಕಷ್ಟಪಡೋದು ನನ್ನ ಹೃದಯಾನ ಇರೀತಿಥೆ........ಇದೊಂದ್ ಕಡೆ. ಇನ್ನೊಂದ್ ಕಡೆಯೋ, ನೀನು ಬೇಡ ಬೇಡಾಂತೆಷ್ಟು ಹೇಳಿದರೂ ಹುಚ್ಚಾಟ ಹಿಡ್ದು ಈ ಎರಡನೇ ಮದುವೇ ನಾಮಾಡಿಕೊಂಡದ್ದು ಮನಸ್ಸಿಗೆ ಬಂದು, ಪಿತೃವಾಕ್ಯಪರಿಪಾಲಕನಾದ ಶ್ರೀ ರಾ ಮ ನ ಹೆಸರ್ನ ಮಾ ತೃ ವಾ ಕ್ಯೋ ಲ್ಲಂ ಘ ಕ ನಾ ದ ಈ ಘಾತುಕನಿಗೆ ಅದೇ ಹೆಸರಿಟ್ಟದ್ದು, ಹೃದಯಾನ ಕೊರೀತಿಥೇಮ್ಮಾ........ಕೊರ್ರೀತಿಥೆ. ಆದರೂ ಈ ಹಸುಳೆ ನಿನ್ನ ಮಗೂ ಅನ್ನೋದ್ಮರೀದೆ ಮನಸ್ಸಿಗೆ ಶಾಂತಿ ತಂದುಕೊಳ್ಳೋದು ನಿನ್ನ ಭಾರಾಮ್ಮಾ ! ( ಬಿರುಸಾಗಿ ) ಆದರೆ ಈ ಪಿಶಾಚಿ ವಿಷಯದಲ್ಲಿ ಇನ್ನೇನೂ ಶಂಕೆ ಇಟ್ಕೋ ಬೇಡಮ್ಮಾ !

" ಸ್ತ್ರೀಣಾಮ್ ಶುದ್ಧ ಸ್ವಭಾವಾನಾಂ ಪತಿರೇವೀಶ್ವರ ಪ್ರಭುಃ "

ಅನ್ನೋ ಭಾರತೋಕ್ತಿಗೂ " ಪತಿಮಾತಾ ಪರಾಗತಿಃ " ಅನ್ನೋ ಆಕಾಶೋಕ್ತಿಗೂ ಪ್ರತಿಕೂಲವಾಗಿ ಅಲ್ಪ ಸ್ವಲ್ಪ ಕದಲಿದ್ನೋ .... .... ಕೈಕಾಲು ಮುರಿದು ಒಲೇಲಿಟ್ಟು ನೀರ್ಕಾಯಿಸಿ ಅದರಲ್ಲಿ

ಬೇಯಿಸಿದ ತನುತಲೆಗಳ್ನ ತೌರ್ಮನೆಗೆ ರವಾನ್ಸೋ ವಿಷಯದಲ್ಲಿ ಶಂಕೆ ಪಡ್ಬೇಡವ್ಮ ! ನಾರಾಯಣಾ ! ....ದೊಡ್ಡ ಜವಾನಮ್ಮನೋರಿಗೆ ಜಪಕ್ಕಿಡು ! ನಾನು ಊಟಕ್ಕೆ ಏಳೋಷ್ಟೊತ್ತಿಗೆ ಫಲಾರಕ್ಕೆ ತಯಾರಾಗಿರ್ಬೇಕವ್ಮ !

ಸುಬ್ಬವ್ಮ :—( ನಿಷ್ಕ್ರಮಿಸುತ್ತಾ—ಸಿಧಾನವಾಗಿ ) ಆಗ್ಲಿ....ದಿನಾ ಹೀಗೆ ಹೊತ್ಬಿಟ್ಕೊಂಡು ಬರ್ತೀಯಲ್ಲಾ, ವ್ಯೆಗಾಗುತ್ತೆಯೇ ಮಗೂ ?!

ರಾಮಣ್ಣ :—[ ತನ್ನಲ್ಲಿ ತಾನೇ ] Scylla....dodged! ಇನ್ನು........ Charybdis ಎಲ್ಲಿ loom ಮಾಡುತ್ತೋ ಕಾಣೆ! As the boy-scouts ಹೇಳೋಹಾಗೆ, I must be preparedಉ!!

[ ವೆಂಕಮ್ಮನು ಬೋರನ ತಲೆಯ ಮೇಲೆ ಟ್ರಂಕು ಹಾಸಿಗೆಯನ್ನು ಹೊರಿಸಿ, ಅವನ ಹಿಂಬಾಲಿಸಿ, ಒಳಗಿನಿಂದ ಹಜಾರಕ್ಕೆ ಪ್ರವೇಶಿಸುವಳು. ]

ವೆಂಕವ್ಮ :—ನಡಿಯೋ !

ಬೋರ :—ಸೀವೊಗ್ಗೆಗೆ.... ಈಟೊತ್ಗೆಲ್ರವ್ವಾ, ರೈಲೂ.... ?

ವೆಂಕವ್ಮ :—ಏಟೊತ್ತಿಗೆ ರೈಲೋ ಆಟೊತ್ತಿನವರಿಗೂ....ಅಲ್ಲೆ ಕುಕ್ಕರಿಸಿ ಕೊಂಡಿರೋದು ನಡಿಯೋ !....ಶನಿ !

ರಾಮಣ್ಣ :—ಈಗೇನು ಮಾಡೋದು?....ಬೆದರಿಸಿದೆನೋ ಬೆದರೋದಿಲ್ಲ. ನಾನು ಬೆದರಿದೆನೋ double ಬೆದರಿಸ್ತಾಳೆ! ಇಲ್ಲಾ......Beg ಮಾಡಿದ್ರೋ ಇನ್ನೂ ತಲೇಗೆ ಹತ್ತಿಬಿಡುತ್ತಾಳೆ-ಹೆದರ್ಸೋದೋ

hopelessoo ; Ergo, mild Surpriseಏ best methodoo....ಅಲ್ಲ....proceedureಊ........ [ ಪ್ರಕಾಶ ] ಓ ಹೋ....ಏನಿದೂ ?

**ವೆಂಕಮ್ಮ** :—ಯಾವ್ದೇನೂ ?

**ರಾಮಣ್ಣ** :— ........ ಇ ........ ಇ ........ ದೂ ?

**ವೆಂಕಮ್ಮ** :—ಇದೇ ?....ಮೇಲಿರೋದು ನನ್ನ ಟ್ರಂಕು ಹಾಸಿಗೆ....ನನ್ನ ತವರ್ಮನೆಯಿಂದ ತಂದದ್ದು. ಅದನ್ನು ಹೊತ್ತಿರೋ ಹೋತ, ನಿಮ್ಮ ಜವಾನ.

**ರಾಮಣ್ಣ** :—ಅಲ್ಲಾ !....ಎಲ್ಲಿಗೆ ಹೊರಟದ್ದೂ....?

**ವೆಂಕಮ್ಮ** :—ಎಲ್ಲಿಗೇನೂ ?....**ನಮ್ಮೂರಿಗೆ, ನಮ್ಮನೇಗೆ**...

**ರಾಮಣ್ಣ** :—ಇಷ್ಟುಹೊತ್ತಿನಲ್ಲೇ ? .... ... ನಮ್ಮ ಮಾವನವರೂ .... .... ಸೌಖ್ಯತಾನೆ ?

**ವೆಂಕಮ್ಮ** :—ಸೌಖ್ಯವಿಲ್ಲದೆ ಏನು ? ನಿಮ್ಮನೇಲಿ ನೀವೂ ನಿಮ್ಮ ತಾಯೀ ನಿಮ್ಮನೇಲೆಷ್ಟು ಸೌಖ್ಯವೋ ನಾನೂ ನಮ್ಮ ತಂದೇನೂ ಅಷ್ಟಕ್ಕಷ್ಟು ಸೌಖ್ಯವಾಗಿರ್ತೇವೆ ........ ನಾಳೆ, ನಮ್ಮೂರಿನಲ್ಲಿ ; ( ಬೋರನಿಗೆ )....ನಡಿಯೋ !

**ರಾಮಣ್ಣ** :—ಕ್ಷಮಿಸು dear ! ........ ಒಂದು ........ three words ನಿನ್ನ ಕಿವೀಲಿ ; ( ಬೋರನಿಗೆ ) ಒಳಗಿಡೊ !!

[ ಬೋರನ ನಿಷ್ಕ್ರಮಣ ]

ವೆಂಕಮ್ಮ :—ಯಾಕದನ್ನ ಕಳ್ಸಿದ್ದೀವು ತಿರ್ಗೀ ...?

ರಾಮಣ್ಣ :—ಇಲ್ನೋಡು dear !........ಹೂಂ !....... good news ! motherಗೆ consumption ಅಂತೆ! From her mother's side; ಅವರಮ್ಮನ್ಕಡೆಯಿಂದ! ಡಾಕ್ಟರ್ ಹೇಳಿದ್ರು! ಇಲ್ನೋಡು dear! ಅಮ್ಮನ್ಗೆ rheumatism, melancholia ....Sciatica, Lumbago........ಹೀಗೆ ಜಗತ್ತಿನಲ್ಲಿರೋ ಜಾಡ್ಯನೆಲ್ಲಾ ಜೋಮಾಲೆ ಹಾಕ್ಬಿಟ್ಟಿಧಾನೆ ಅಮ್ಮನ ಕುತ್ತಿಗೇಗೆ...... ....ಡಾಕ್ಟರು. ಇನ್ನೆಷ್ಟು ದಿನಾಂತ ಬದ್ಕಿದ್ದಾಳೂ? ಇನ್ಮೂರು ತಿಂಗ್ಳಲ್ಲಿ sensible ಆಗಿ ಸತ್ತಳೋ?, ಬದ್ಕಿದ್ಳೂ! ನಿಂತಳೋ!?, ಅದಕ್ ಬೇರೆ arrangement ಮಾಡಿಧೇನೆ....ನಾರಾಯಣಾ!

ನಾರಾಯಣ :— ( ಪ್ರವೇಶಿಸಿ ) ಸ್ವಾಮಿ !

ರಾಮಣ್ಣ :—ನಿಮ್ಮಮ್ಮ ಯಾವಾಗ ಕಾಶೀಗ್ಹೊರಡೋದು .... .... .... ( ವೆಂಕಮ್ಮನಿಗೆ ) ಕೇಳು dear !

ನಾರಾಯಣ :—ಸ್ವಾಮಿ ಅವತ್ತೇ ಹೇಳಿದ್ರಲ್ಲಾ !....ಅನ್ಕೂಲಗಳು ಒದಗ್ಸಿ ಅನುಜ್ಞೇನೂ ಕೊಟ್ ತ-ತಕ್ಷಣವೇ !

ರಾಮಣ್ಣ :—ಸರಿ....ಹೋಗು (ನಾರಾಯಣ : ನಿಷ್ಕ್ರಮಣ ) ....ಕೇಳು dear ! ಇನ್ಮೂರ್ತಿಂಗಳಲ್ಲಿ ಸತ್ತಳೋ?,....ಬದ್ಕಿದ್ಳು!! ಇಲ್ವೋ?,

ವಾರಣಾಸಿ ! return ticket ಇಲ್ಲಾ! ...ಸಂಚಯನದವರಿಗೂ ನಾರಾಯಣಾ ಅಲ್ಲೇ ತಿಕಾಣಿ....ಇನ್ನೂರೇ ತಿಂಗಳು dear !....

ವೆಂಕಮ್ಮ :—( ನಿಧಾನವಾಗಿ ಒಳಗೆ ಹೋಗುತ್ತಾ ) ಅದೇನ್ಮೂರ್ತಿಂಗ್ಳೋ, ಅದನ್ನೂ ನೋಡ್ಬಿಟ್ಟೇ ಹೋಗ್ತೀನಿ.

[ ನಿಷ್ಕ್ರಮಣ. ]

ರಾಮಣ್ಣ :—Oh my God !! ....ಅಲ್ಲಾ ? ಇನ್ನೆಷ್ಟು ದಿನಾಂಕ್ಹೀಗೆ playing off one against the otheroo ಫಲಿಸುತ್ತೋ ಕಾಣೆ !!

[ ನಿಷ್ಕ್ರಮಣ ]

———:೦:———

## ದೃಶ್ಯ : ನಾಲ್ಕನೆಯದು

### ಸ್ಥಾನ :—ಪೂರ್ವವತ್

[ ವೆಂಕಮ್ಮನು ಕುಳಿತಿರುವಳು—ಬೋರನು ತರಕಾರಿಯ ಬುಟ್ಟಿಯನ್ನು ಹಿಡಿದು ಪ್ರವೇಶಿಸುವನು. ]

ವೆಂಕಮ್ಮ :—ತರಕಾರಿ ಕೆಳಗಿಟ್ಟು .... ಏಂಗಡಿಸೋ !

ಬೋರ :—ಯಜಮಾನ್‌ರೇಳವ್ರುವ್ವಾ .... .... .... ತರಕಾರೀನಾ ಮುಂದಿನ ಕೋಣೇಗಿಡಬಾರದೂಂತಾ ....

ವೆಂಕಮ್ಮ :—ಯಾಕೋ .... ಕಾಣೆ .... ?

ಬೋರ :—ಡಾರ್ರಿರೂಮ್ ( Drawing Room ) ಅಂತೆ .... ತರಕಾರಿ, ಅಡಿಗೆ ಬಾಬ್ತು .... .... ಇಂವಿನ ಕೋಣೇಗೆ .... ಇಟ್ಕೋಬೇಕೂಂದ್ರೂರ್‍ರವ್ವಾ....ಯ.... ಯಜಮಾನ್ರೂ !

ವೆಂಕಮ್ಮ :— ಇಲ್ಲಿ ಬಾರೋ ! ನಾನ್ಯಾರೋ ? ....

ಬೋರ :—ಯಾಕ್ರವ್ವಾ ? . ಅಮ್ಮಾವರೂರವ್ವಾ !

ವೆಂಕಮ್ಮ :—ಯಾರೋ .... ಸಂಬಳ .... ಕೊಡೋರೂ ?

ಬೋರ ;—ಯಾಕ್ರವ್ವಾ ? .... ತಾವೇರ್‍ರವ್ವಾ !

ವೆಂಕಮ್ಮ :—ನಿನಗೇ ಸಂಬ್ಳದ್ ಗಿಂಬ್ಳದ್ ಮೇಲೆ ಕಣ್ಣಿರೋದಾದ್ರೆ, ಇರ್ದ ಮಟ್ಟಿಗೆ ಮರೀಬೇಡ .... ( Insistently ) ಈ ಮನೆಗೆ ಯಜಮಾನ್ರು ಒಬ್ರೆ. ಅದ್ಯಾನು ! ಅರ್ಥವೇನೋ ?

ಬೋರ : —ಊರ್ರವ್ವಾ.

ವೆಂಕವ್ಮ :—ಹಾಗಾದ್ರಿಡು ಕೆಕ್ಗಿ !

ಬೋರ :—[ ಬುಟ್ಟಿಯನ್ನಿಳಿಸಿ ತರ್ಕಾರಿಗಳನ್ನು ವಿಂಗಡಿಸುವನು ]

ವೆಂಕವ್ಮ.—ಬಾಕಿ ಚಿಲ್ರೆಯೆಲ್ಲೋ ?

ಬೋರ : —ಇಕ್ಕೊಳ್ಳಿರವ್ವಾ

[ ಚಿಲ್ಲರೆಯನ್ನು ನೆಲದ ಮೇಲಿಡುವನು ]

ವೆಂಕವ್ಮ.—ಸರಿ ... ಹೋಗು. [ಬೋರನು ನಿಷ್ಕ್ರಮಿಸುವನು] [with a far away look around ] ನನ್ನ ಕೈ ಪೆಟ್ಟಿಗೆ ಬೀಗದ ಕೈ ಎಲ್ಲೀ ...?

[ ಹುಡುಕಲು ಎದ್ದು ಒಳಗೆ ಹೋಗುವಳು ]

ರಾಮಣ್ಣ :—[ ಪ್ರವೇಶಿಸಿ, ಹಠಾತ್ತಾಗಿ ] ಬೋರಾ ! ! !

ಬೋರ :—( ಓಡಿ ಬಂದು ) ಬುದ್ಧೀ !

ರಾಮಣ್ಣ :—ಇದೇನೋ ಇದೂ ?

ಬೋರ :—ಯಾಕ್ಬುದ್ದೀ ? ತರ್ಕಾರೀ ಬುದ್ದೀ !

ರಾಮಣ್ಣ :—ಕಣ್ಕಾಣುತ್ತೇ ? ........ ..ಹಾಗಾದ್ರೆ ಕಿವೀನು ಕೇಳಿಸ್ ಬಹುದು ! .... ಆ ಹೊತ್ತೇನ್ಹೇಳ್ದೆ ನಿನಿಗೇ .... ?

ಬೋರ :—ತರ್ಕಾರೀ ಇಂದಿನ ಕೋಣೇ ಒಳ್ಗೆ ಇಡ್ಬೇಕೂ....ಅಂ... .... ತಾ .... ಬುದ್ದೀ.

ರಾಮಣ್ಣ :—ಮತ್ಯಾಕೋ ಇಲ್ಲಿಧೇ ?

**ಬೋರ** :—ಯಜಮಾನ್ರು.... ... ಇಡ ... .... ಬೈಯದು ...ಅಂ....ತಂದ್ರು ಬುದ್ಧೀ!

**ರಾಮಣ್ಣ** :—ಇಡಬಾರದು ಅಂತ್ಹೇಳಿದ್ದೇನೆ **ನಾನು !** ಇಡಬೈದು ಅಂತ್ಯಾರೋ ಹೇಳಿದ್ರು? ಈ ಮನೇಗೆ ಎಷ್ಟು ಜನಾನೋ ಯಜಮಾನ್ರೂ?

**ಬೋರ** :—ಒಬ್ಬರೇ ಒಬ್ಬರು ಬುದ್ದಿ! ಅವಮ್ಮಾವ್ರೇಳವರೆ........ಅದೂ ತಾವೇ ...ಅಂತ.

**ರಾಮಣ್ಣ** :—[with great relief ; triumphantly] ಹಾಗಾದರೆ ಒಪ್ಕೊಂಡ್ರು....ನಾನ್ಮನೇಯಜಮಾನ್ರೂಂತ!

**ಬೋರ** :—ಅಲ್ಲ ಬುದ್ದೀ! .........ತಾವೇ ........ತ್ಮಾವೇ........ಅಂತ.

**ರಾಮಣ್ಣ** :—I see! There is only one master in the house and that is the mistress!! ಇನ್ ನನ್ಮಾತ್‌ಸುಳ್ಳಾಗ್ಲಿದ್ರೋಕೇ ಆ ಮುಂದಿನ್ಗೇಟ್ಬಾಕಲ್‌ನಾ, ಹಿತ್ತಿಲ್ ಬಾಗಲ್‌ಗ್ಬಾಕಿಸ್ ಬಿಡು........ತೊಲಗು! ನೀನ್ ನನ್ ಕಣ್ಣೆದುರ್ಗೆ ಇರಬೇಡ!

[ ಬೋರನ ನಿಷ್ಕ್ರಮಣ ]

(collapsing into a chair) ...ಹೀಗೆ ಜವಾನ್ರೆದಿರ್‌ಗೆಲ್ಲಾ ಹೀಯಾಳ್ಸೋಕೆ ಷುರುವು ಮಾಡಿಬಿಟ್ಟಳಲ್ಲಾ!........What about my position? ಇಷ್ಟಕ್ಕೂ marriageನಲ್ಲಿ

ಕಣ್ಬಿಡೋಕೆ ಅರಿಯದ ಕೂಸಾಗಿದ್ದು . awfully simple ಆಗಿದ್ದೋಳೂ ಈಗ... ..she has become simply awfulಉ! ಈ ಬಾಬತ್ ಗಾನಾ ಬೈಲಿಗೆ ಬಿತ್ರೋ ಬೋಳಿಸ್ದ್ಹಾಗೇ ನನ್ನ reputationoo. I know what it is! She has non-entetised me! ಈಗ್ಲೇ assert ಮಾಡಿಕೊಂಡ್ನೋ ನನ್ನ positionನ್ನಾ ?, ಬದಿಕ್ದೇ!.... ಇಲ್ದಿದ್ರೋ ?, I shudder to think what may happen !!. ... Oh! Eight O'clock!........ still no coffee! Good ... excuse!....ಛ್ಲೀ !!

[ Sail in ವೆಂಕಮ್ಮ ]

ರಾಮಣ್ಣ :—( ಕಿರುಚುತ್ತಾ ) ಘಂಟೆ ಎಷ್ಟೇ...? .

ವೆಂಕಮ್ಮ :—(ಸ್ವಗತ) ಸರಿ! ..ಬೆಳಕ್ಹರಿಯೊ ಹೊತ್ತಿಗೆ ಪ್ರಾರಂಭಿಸಿ ಬಿಟ್ಟರೆ ಹೀಗೇ .....ಇನ್ನು ಸಂಜೆ ಹೊತ್ತಿಗೆ ಸೂರು ಮುರುದು ಬಿಡುತ್ತೋ ಏನೋ ಕಾಣೆ ...ಇದನ್ನೀಗ್ಲೇ ಅಡಗಿಸಿ ಬಿಡಬೇಕು! (ಪ್ರಕಾಶ) ...ಏನದ್ ಕೇಳಿದ್ದೂ ?

ರಾಮಣ್ಣ .—ಅಲ್ಲ . ...ಘಂ......ಟೆ ....ಎಷ್ಟೂಊಂತ ಕೇಳಿದ್ದು........

ವೆಂಕಮ್ಮ :—ನನ್ಕೇಳೀಪ್ರಯೋಜನ? ನನಗ್ಗಡಿಯಾರ ಕೊಂಡ್ಕೊಡೋ ಯೋಗ್ಯತೆ ನಿಮಿಗೆ ಬಂದಾಗ ಕೇಳಿದರೆ ಸಾಲ್ದೇನೋ ?........ಗಜದ ಹಾಗೆ ತಾವ್ ಗಡಿಯಾರಕ್ಕೆ ತಕ್ಕ ಸರಪಣಿ ಹಾಕ್ಕೊಂಡು ಜೇಬಿನಲ್ಲಿಟ್ಕೊಂಡು ನನ್ನ ಕೇಳುತ್ತೀ ಗಂಡಸು, ಘಂಟೆ ಎಷ್ಟು ಅಂತ!

**ರಾಮಣ್ಣ** :—ಘಂಟೀ.... ನನಗ್ಗೊತ್ತೂ ...

**ವೆಂಕಮ್ಮ** :—ಗೊತ್ತಿದ್ದೂ ಕೇಳಿದಿರಾ ! ಇದೇನ್ ಅತಿ ಬುದ್ಧಿಯೋ ?.... ಹುಚ್ಚೋ ? ಗಂಡಸಿಗೇನ್ ಎರಡೂ ಒಂದೇ........ !

**ರಾಮಣ್ಣ** :—ಅಲ್ಲಾ .......ಆ ... . ಕಾಫೀಗ್ಯಾಕಿಷ್ಟೊತ್ತೂ........ಂತ....

**ವೆಂಕಮ್ಮ** :—ಕಾಫೀಗ್ಯಾಕಿಷ್ಟೊತ್ತಾಯ್ತೂ ಅಂತ ಕೇಳೋಕೆ........ ಇಷ್ಟೊಂದು ಬಳಸ್‌ಕೊಂಡು ಬಳಸ್‌ಕೊಂಡು ಪ್ರಶ್ನೇನೋ ? .... ...ಲಾಯ:ರಿ ಅಲ್ವೇ ಲಾಯರಿ !........ ಇಷ್ಟೊತ್ತೇನೂ ? .... .... ... . .. ಹಾಲ್ನೋನು ಎಷ್ಟೊತ್ತಿಗೆ ಬರ್‍ತಾನೊ ಅಷ್ಟೊತ್ತಿಗೇ ! .. . ..ಹಿಂದಿನಾರ್ತಿಂಗಳ ಲೆಖ್ಖಾಆನೂ ಬಾಕೀ ಇಟ್ಕೊಂಡು, ಬೆಳ್ಳಂಬೆಳಕು ಹರಿಯುತ್ತಲು ಸರಸರಾಂತ ಬಂದು ಸುರಿದ್ ಬಿಟ್ಟುಹೋಗೋಂದ್ರೆ ಎಲ್ಲಾಗುತ್ತೆ. ? ನಿಮ್ಮ ಚಾಟೂಕ್ತಿಗಳಿಗೆಲ್ಲಾ ಚಪ್ಪಾಳೆ ತಟ್ಕೊಂಡು ಕುಣೀತಿರೋಕೆ ನನಗೆ ಬಿಡುವಿಲ್ಲಾ ! ಕೆಲಸಗಳ್ ಬೇಕಾದಷ್ಟು ಬಿದ್ದಿವೆ ! ....**ತಕ್ಕೊಳ್ಳಿ !**

[ ಕಾಫಿ ಚೊಂಬು-ಲೋಟಗಳನ್ನು ಮೇಜಿನ ಮೇಲೆ ಕುಕ್ಕುವಳು ]

**ರಾಮಣ್ಣ** :—( ಕಾಫಿಯನ್ನು ಲೋಟಕ್ಕೆ ಬಗ್ಗಿಸಿನೋಡಿ ) ಏನೇಇದು....ಆ ....ಏನೇ ಇದು ಈ ಕಾಫಿ....ಬಣ್ಣಾ........?

**ವೆಂಕಮ್ಮ** :—ಬಣ್ಣವೇನು, ಕಾಫಿ ಬಣ್ಣ ! ಬೆಳ್ಳಂಬೆಳ್ಳಗೂ ಇರಬೇಕೂ, ಕಾಫೀಂತಲೂ ಆಗಬೇಕುಊಂದ್ರೆಲ್ಲಾಗುತ್ತೆ !...ಏನು ಕಷಾಯಕ್ಕೆ ಹಾಲೋ ಹಾಲಿಗೆ ಕಷಾಯವೋ ?....ಈಹೊತ್ತೇನ್ ಬಣ್ಣಾಂತ

ಪ್ರಾರಂಭಿಸ್‌ಬಿಟ್ರೇ? ಆಹೊತ್ತು ಬೆಂಡೋಲೆ-ಮಾತೆತ್ತಿದಾಕ್ಷಣವೇ "ಮಿಕ್ಕೋರ್ ನೋಡಿ ಸಂತೋಷ್ಪಡೋಕೆ ನಮ್ಮ ಕೈಯಿಂದ್ ಕಾಸ್ತೆತ್ತು ಕೊಂಡ್‌ಕೊಂಡು ಯಾಕ್ತಗಲಿಸ್ಕೋಬೇಕ್ ಕಿವೀಗೇ?, ತನ್ ಕಿವೀಲಿರೋದು ತರಪಾಗಲೀ ಹರಳಾಗಲೀ ತಾನ್ನೋಡಿ ಸಂತೋಷ್ಪಡೋಕೆ ಕಿವೀಲೇನೂ ಕಣ್ಣಿಡಲಿಲ್ಲಾ ಭಗವಂತಾ"ಂ ತಂದ್ರಲ್ಲಾ!......ಈಗ ಅದೇ ಭಗವಂತಾ ಕಾಫಿ ಬಣ್ಣಾನೋಡಿ ಆನಂದ್ಪಡೋಕೆ ಹೊಟ್ಟೇ ತುಂಬ ಕಣ್ಣುಗಳು ಹೂತಿಟ್ಟಿ ದಾನೇನೋ! ..ಕ್ಕುಡ್ಡೀರ್ರೀ ಅಂದ್ರೇ........ಓಹೊ!

**ರಾಮಣ್ಣ** :—ಛೆ ... ...**terrible**ಏ. ನಿನ್ನ tongueoo!

[ರಾಮಣ್ಣನು, ವೆಂಕಮ್ಮನು ಕೊಟ್ಟ ಕಾಫಿಯನ್ನು ಒಂದು ಗುಟುಕು ಕುಡಿದು, ಅದರ ರುಚಿಯನ್ನು ವದನದಲ್ಲಿ ವ್ಯಕ್ತಿಸುವನು]

**ವೆಂಕಮ್ಮ** :—ಇದೇನು!...ಏನಿದು ಮೋರೆ ವಿಕಾರ?...ಕುಡಿಯೋದ್ದೇ ಕಾಫೀನೋ ಕೈಯೆಣ್ಣೇನೋ?

**ರಾಮಣ್ಣ** :—ಅಲ್ಕಾಣೇ! .. ....ಕಹಿ! ಸಕ್ಕರೆ! ಸಿಹಿ....ಉಂ. .. ....

**ವೆಂಕಮ್ಮ** :—ಎಷ್ಟೋ ಬುತ್ತೂಂತ ಎಗರಾಡಿದ್ದಾಯ್ತು. ಬಣ್ಣಾನೋಡಿ ಬಡುಕೊಂಡಿದ್ದಾಯ್ತು. ಈಗ ಕಹಿ...ಸಿಹಿ....ಅಂತ್ಹೇಳೋಕೇ.... ನರ ಇದೆಯೇನೊ....ಗಂಡಸ್ಗೆ....ನಾಲ್ಗೇಲಿ....?

**ರಾಮಣ್ಣ :—ಲೇಏ!!....ನನ್ನಾಲ್ಗೇಲಿ ನರವಿರೋದು ಹಾಗಿರ್ಲೇಏ!** ....ನಿನ್ನಬಾಯಿಗೆ brake ಏನಾದರೂ ಇದೆಯೇನೇಏ!.... What a metallic mouthಏ ನಿಂದೂಉ............?

**ನೆಂಕೆಮ್ಮ**:—ಇದೊಂದು ಜಾಣತನ ಗಂಡಸರ್‍ದು! ಚರ್ಚೆಗೆ ಮಾತು ಹೊರಡದಿದ್ರೇ ಸರಿ .. ಇಂಗ್ಲೀಷು!....

[Exiting; to Bora]—ಬೋರಾ! ರಾಯರು ಕೋಣೇ ಬಿಟ್ಟ್ಹೋದಾಗ ಹೇಳೋ ನನಗೇ!

[ನಿಷ್ಕ್ರಮಣ]

**ರಾಮಣ್ಣ**:—Too lateಉ? Hಹಾಗಾರೆ too lateoo? ಈ tigressನ tame ಮಾಡೋದು ...too lateoo!!

[ರಾಮಣ್ಣನು ಅವಾಕ್ಕಾಗಿ ಅವಳು ಹೋದ ಕಡೆಯನ್ನೇ ಎವೆಯಿಕ್ಕದೆ ನೋಡಿ, ನಂತರ ಹತಾಶನಾಗಿ ತಲೆಯನ್ನು ನಿಧಾನವಾಗಿ ಮೇಜಿನಮೇಲೆ ತಗ್ಗಿಸುವನು]

———:o:———

## ದೃಶ್ಯ : ಐದನೆಯದು

ಸ್ಥಾನ :—ಅದೇ.

[ಮಾರ್ಕೆಟ್ಟಿನಿಂದ ತಂದ ತರಕಾರಿಯನ್ನು ಮುಂದಿಟ್ಟುಕೊಂಡು]

**ವೆಂಕಮ್ಮ** :—ನಾರಾಯಣಾ ! ಈಳಿಗೆ ಮಣೆ ತಕ್ಕೊಂಡ್ಬಾರೋ ......
ಹಾಗೇನೇ ಒಂದಡಕ್ ನೊಳಗೆ ನೀರೂನೂ....

**ನಾರಾಯಣ** :—( ತರುವನು )

**ವೆಂಕಮ್ಮ** :—ನಿನ್ನಪ್ಪ ಕಾಫೀ ತಂಗ್ಗೀಯೆಲ್ಲಾ ಯೆತ್ತಾಯ್ತೇನು ?

**ನಾರಾಯಣ** :—ಇಲ್ಲಮ್ಮ.

**ವೆಂಕಮ್ಮ** :—ಯಾಕ ? ಎಂಟ್ಹೊಂಟ್ಯಾಗಿಲ್ವೇನು ಇನ್ನೂ ?

**ರಾಮಣ್ಣ** :—( ಒಳಗಿನಿಂದ ) **ನಾರಾಯಣಾ !**

**ನಾರಾಯಣ** :—ಇದೋ ಬಂದೆ ಸ್ವಾಮಿ !

[ ನಿಷ್ಕ್ರಮಣ ]

**ವೆಂಕಮ್ಮ** :—ಇದೇನ್ಗಲಾಟೆ ಆಫೀಸು ರೂಂನಲ್ಲಿ ?

**ನಾರಾಯಣ** :—( ಪ್ರವೇಶಿಸಿ ) ಅಪ್ಪಾ ನಾಲಕ್ಕ್ಜನಕ್ಕಾಫೀ ಆಗ್ಬೇಕಂತೆ.

**ವೆಂಕಮ್ಮ** :—ಗೊತ್ತು ! ವರುಷ್ವೆಲ್ಲಾ ಇಲ್ಲದ ಸ್ನೇಹೋಪಚಾರಗ್ಳೆಲ್ಲಾ
ಈ ಎಲೆಕ್ಷನ್ (election) ಕಾಲ ಬಂದ್ರೆ ಷುರು !
(Vote) ವೋಟುಗಳ ಬೇಟೆಯೋನೋ ! ಹೀಗೆ ಕಾಫಿ ಕೊಟ್ಟು
Car ನಲ್ಲಿ ಕೂಡಿಸ್ಕೊಂಡ್ಹೋಗಿ ಕಸುಕೊಂಡ ವೋಟುಗಳಿಂದ

...ಪ ಕೌನ್ಸಿಲರ್ ಕೆಲಸವಿಲ್ದಿದ್ರೇನ್ನಷ್ಟವೋ ಕಾಣೆ! ....... ...
ಈಗಿನ್ನಿಷ್ಟ ...ನಕ್ಕೆ ಪುಡಿ ತಂಪೂ....

**ನಾರಾಯಣ** :—ಪುಡಿ ಇದೇಮ್ಮ ಡಬ್ಬದಲ್ಲಿ!

**ವೆಂಕಮ್ಮ** :—ಡಬ್ಬದಲ್ಲಿ ಪುಡಿ ಇದೆ ಗೊತ್ತು: ನಾಳೇ ಕಾಫೀಗೆ.... .... ಮನೇಗೆ. ನಿನ್ಕಾಫೀ ಅಂಗ್ಡಿ ಎತ್ತಿದ್ಮೇಳ್ಗೇ ಕೆಲಸವಾಯ್ತು. ಆ ಸೋದಿಸಿದ್ಬಟ್ಟೇ ಮೇಲೆ ಒಂದ್ಸಾರಿ ಹಾಕಿದ ಪೌಡರ್ನ ಪುರ್ರೋ ನೀರ್ನ್ನಲ್ಹಾಕಿ ತಿರಗ್ಮರ್ರಿಸಿ ಸೋದ್ಸಿ, ಒಂದಷ್ಟುಹಾಲ್ಹಾಕಿ ಹೋಗ್ಸರಿ! ಸಕ್ರ ಜಾಸ್ತಿ ಹಾಕು, ಏನೂ ಗೊತ್ತಾಗೋದಿಲ್ಲ. ಇನ್ನಾಳೆಯಿಂದ ಆವತ್ತಾವತ್ಹಾಕಿದ ಪುಡೀನ್ನೆಲ್ಲಾ ಮಧ್ಯಾಹ್ನ ಬಿಸಿಲ್ಮಾಡ್ಡೀಲಿಟ್ಟು ಡಬ್ಬಕ್ಹಾಕಿಡು,—ಮೂರನೇ ದಿನದ ಎಲೆಕ್ಷನ್ ಕಾಫೀಗೆ-ಈ ವೋಟುಗಳ ಬೇಟೆ ನಿಲ್ಲೋವರೆಗೆ. ( ನಾರಾಯಣನು ಹೊರಡುತ್ತಿರಲು ) ಇಲ್ಲಾ....ಈ ವೋಟುಗ್ಳು ಸಂಪಾದಸೊ ವಿಜೃಂಭಣೇಲಿ ಮೈಮರ್ತೋಂದ್ವೇಳೆ ಊಟಕ್ಕೆ ನಿಲ್ಸಿದ್ರೂ ನಿಲ್ಸ್ಯಾರು; ಒಂದ್ವೇಳೆ ಅವರಿರೋಪಕ್ಷಕ್ಕ ದಪ್ಪಕ್ಕಿಹಾಕು ಎಲ್ರಿಗೂ. ಬಂದ ಸ್ನೇಹಿತರ್ಗೆಲ್ಲಾ ಸಣ್ಣಕ್ಕೀಲ್ಸಮಾರಾಧ್ನೆ ಮಾಡಿದ್ರೆ ಮೂರ್ದಿನ್ದಲ್ಲಿ ಮನೇ ಮಾರ್ಕ್ಕೊಂಡ್ ಮೈದಾನದಲ್ಲಿ ನಿಲ್ಲ ಬೇಕಾಗುತ್ತೆ ಕೈಚಾಚ್ತಾ.... !

**ನಾರಾಯಣ** :—ದಪ್ಪಕ್ಕಿ ರಾಯರ ಮೈಗಾಗೋದಿಲ್ವಮ್ಮಾ ?

**ವೆಂಕಮ್ಮ** :—ಗೊತ್ತು. ಅವರಿಗ್ಮಟ್ಟಿಗ್ಗೋದೀ ಅಕ್ಕೀ ಹಾಕ್ಬಿಡು-ಅನ್ನಾ ನ್ನೋಡಿ ಡಯಾಬಿಟೆಸ್ನೂಂತ ( Diabetes ) ಹೇಳ್ಕೊಳ್ಳೋ ಚಾಣ್ಮನವಿದೆ ಅವರಿಗೆ.

**ನಾರಾಯಣ** :—( Hesitatingly ) ತುಪ್ಪಾವ್ಮಾ ?

**ವೆಂಕಮ್ಮ** :—ಏನ್ತುಪ್ಪಾವ್ಮಾ ?

**ನಾರಾಯಣ** :—ಗೊತ್ತಿಲ್ದೆ ಹ್ಯಾಗ್ಬಡಿಸೋದಮ್ಮ ?

**ವೆಂಕಮ್ಮ** :—ದೊಡ್ಮಿಳ್ಳೇಲಿಕಾಸಿತ್ತುಪ್ಪತುಂಬ್ಕೊಂಡು ಅಂಗ್ಗೀ ತುಪ್ದಡಕ್ನಲ್ಲಿ ಭದ್ರವಾಗಿ ಹಿಡ್ಕೊಂಡು, ಮಿಳ್ಳೇದ್ರಾಯರಿಗೆ ಬಡ್ಸಿ, ಮಿಕ್ಕೋರ್ಗೆ ಡಕ್ನಲ್ಲಿರೋದ್ಬಡಿಸು. ಯಾರಿಗೂ ಗೊತ್ತಾಗೋದಿಲ್ಲ. ಇದು ರಾಯರು ಮೊದಲ್ಕೂತಿದ್ರೆ;... ಮಂಕನ್ಹಾಗೆ ಮಧ್ಯದಲ್ಕೂತ್ರೇ, ಅನ್ನದಲ್ಲೇ ಕಲ್ಸ್ಹಾಕ್ಬಿಡು.

**ನಾರಾಯಣ** :—ತರ್ಕಾರಿ ಕೊಂಚ್ವಾಗಿದೆಯಲ್ಲಮ್ಮ ?... .. ಇಷ್ಟ್ಜನಕ್ಕೂ ಪಲ್ಯಕ್ಕೆ ?........

**ವೆಂಕಮ್ಮ** :—ಹಂಪ್ಯಯ್ಯೋ ! ನಿನ್ಗೆ ತಲೆಯೆಲ್ಲಾ ಬುದ್ಧೀನ್ಸೋದು ತುಂಬಿ ತುಂಬಿ ತುಳುಕಿ ತುಳುಕಿ ಸುರೀತಿದೆ ಮುಖದಲ್ಲಿ ! ಯೋಚ್ನೆ ಏನೋ ? ಒಂದಿಷ್ಟ್ಪಲ್ಯಬೇರೆ ತೆಗೆದಿಟ್ಕೊ ಒಂದ್ಹಿಡಿ ಉಪ್ಪುಜಾಸ್ತಿ ಹಾಕಿ ಬಂದೋರಿಗ್ಬಡ್ಸು! . ತಿರಿಗಿ ಕೇಳ್ತಾರೇನೋ ನೋಡೋಣ ! ಇಷ್ಟ್ಮಟ್ಗೆ ತಿಳೀದಿದ್ದ ನಿನ್ಜ್ಞಾನಕ್ಕೆ ಬೆಂಕೀ ಹಾಕ್ಬೇಕು. ಇನ್ಹೋಗು !....ತಿರಿಗೀ ಕಾಫೀ ಅಂತ್ಬಡಕೊಂಡಾರು.

**ನಾರಾಯಣ** :—(ಸ್ವಗತ) ಅಬ್ಬಬ್ಬಾ ! ನಮ್ಮ ಅವ್ಮಾವ್ರಲ್ವೇ ಮಾಡ್ಬೇಕ್ ಲಾಯ್ರಾ ಕೆಲ್ಸ ! ಪಾವಕ್ಕೀಗೆಷ್ಟ್ಅಗ್ಳೂಂತ ಲೆಖ್ಖಾ ಗೊತ್ತಿರೋ ಈ ಯಮ್ಮ ಗಂಡ್ಸಾಗ್ಹುಟ್ಟಿದ್ರೆ ಕಾಡ್ಪಾಲೇ ಅಲ್ವೇ ಕಕ್ಸಿಗಾರ್ರು !!

[ ನಿಷ್ಕ್ರಮಣ ]

**ವೆಂಕಮ್ಮ**:—ಅಯ್ಯೋ ದೇವ್ರೇ! ಏನ್ಹಣೇಬರ್ಹ ನನ್ದು! ಹೀಗ್ನಾನ್ ಕಾಸಿಕ್ಕಾಸ್ಗ್ಯೂಡ್ಹಾಕಿ ಈ ಹಾಳ್ಸಂಸಾರಾನುದ್ಧಾರ ಮಾಡಿ ಏನ್ಸಂದ್ಹಾಗಾಯ್ತು ನನಗೆ? ಈ ಕಾಲದ್ಹೆಂಗಸ್ರ ಗತಿಯೆಲ್ಲಾ ಹೀಗೇ! ತಕ್ಕಯಸ್ಸಿನ್ಗಂಡ, ಮಕ್ಳೂ, ಬೇಕೂಂದ್ರೇ ಮಾವಳ್ಳೀಲ್ಮನೆ, ಒಪ್ಪತ್ತೂಟ, ಕಡ್ಡೀ ಅಗಲಂಚಿನ ಸೀರೆ ದೀಪಾವಳೀಗೆ—ಕತ್ತಿಕ್ಕರೀಮಣಿ!....ಇಲ್ಲಾ?—ಅನ್ನ-ಅಂತಸ್ತು-ಸೀರೆ-ಒಡ್ವೆ-ಈ ಹೆಂಗಸ್ರ ಚಪ್ಲ ತೀರ್ಸ್ಕೋಬೇಕೂಂದ್ರೆ—ಮಾಸೆನೆರ್ದವನ್ಗೆ ಮಾದವಣ್ಗಿತ್ತಿ ಆಗ್ಬೇಕು!! ಆದ್ರೆ ಹೆಂಗ್ಸಿಗೇನು-ಮನೆ ಮಾವಳ್ಳೀಲ್ಲಾನೇ ಆಗ್ಲಿ—ಮಲ್ಲೇಶ್ವರದಲ್ಲಾನೇ ಆಗ್ಲಿ-ಮನೇ ತುಂಬಾ ಮಕ್ಳನ್ನಾಕ್ಕೊಂಡ್ಸಂತೋಷ್ಪಡೋದಲ್ವೆ ಅವಳ್ಹುಟ್ಟಿದ್ದಕ್ಸಾರ್ಥಕ್ಯ! ನಾನ್ಹೆಂಗ್ಸಾಗಿಹುಟ್ಟಿದ್ದಕ್ಕೆ ಮುದ್ದಿಟ್ಕೋಕೊಂದ್ಮಗೂ ಇಲ್ಲದ್ಮೇಲೆ ಈ ಶನೀಗೆ ಏನಿದ್ರೆ ತಾನೆ ಏನು? (Snivelling) ............ ಈಗ್ನಂಪುಟ್ಟಾನ್ನಾದ್ರೂ ನಮ್ಮಕ್ಕನ್ಮಗನಿಗೆ ತಂದ್ಕೊಂಡು ಮನೇಲೀ ಇಟ್ಕೊಂಡಿರೋಣಾಂದ್ರೆ ಆಯೋಚ್ನೇಗೂ ಕಲ್ಬೀಳೋ ಹಾಗಿದೆ-ಈ ಮನೇ ಮುದ್ಕಿ, ಕೆಂಚೂ ವಿಷಯದಲ್ಲಿ ಹಿಡಿದಿರೋ ಹಟಾನ್ನೋಡಿದ್ರೆ! ಕಿಟ್ಟೂಗ್ ಮುವತ್ತೈದ್ವಯಸ್ಸಾಗ್ತಾ ಬಂತು. ಅವನಿಗೂ ಇಷ್ಟವಿಲ್ಲ-ಇವನ್ನ ನಿರ್ಬಂಧಪಡ್ಸಿ ಚಿಕ್ಕಯಸ್ಸಿನ್ಹುಡ್ಗೀನ್ಯಾಕ್ಬಲೀಕೊಡ್ಬೇಕೀ ಮುದಿಗೂಬೆಗಳ್ಹುಚ್ಚಾಟ ತೀರ್ಸೋಕೆ? ಬೇರೆ ಯೇನಃ-ನಾಗಮ್ಮನಾಸ್ತೀ ಎಲ್ಲಾ ಈ ಮನೆಗೆಳ್ಯೋಕೇ!!

[ ಪ್ರವೇಶ ಸುಬ್ಬಮ್ಮ ]

**ಸುಬ್ಬಮ್ಮ**:—ಲೇ! ಏನ್ಮಾಡ್ತಿದ್ದೀಯಾ?

ವೆಂಕಮ್ಮ :—( half sneeringly )…. ….ಕೊತ್ಕೊಂಡು ಬರೀಕ್ಕೆ ಬೀಸ್ತಿದೇನೆ.

ಸುಬ್ಬಮ್ಮ :—ಅಲ್ಲಾ ! ಸುಮ್ನೆ ಕೇಳಿದ್ದಕ್ಕಿಷ್ಟು ಪ್ರಸಂಗವೇ ?

ವೆಂಕಮ್ಮ :—ಕಣ್ಬಿಟ್ಕೋಡೀ ತಿಳ್ಕೋಬೇಕಾದ್ವಿಷ್ಯಾನಾ ಬಾಯ್ಬಿಟ್ ಕೇಳಿದ್ರೇ ಪ್ರಾರಂಭ್ವೇ ಆಗುತ್ತೆ….ಪ್ರಸಂಗ !

ಸುಬ್ಬಮ್ಮ :—( ಸ್ವಗತ ) ಸರಿ….ಈ ಪಿಶಾಚೀ ಬಾಯ್ಕೆದ್ರು ಬದುಕೋರ್‍ಯಾರು ? ( ಪ್ರಕಾಶ ) ಆ ವಡ್ವೆಗಳ್ವಿಷ್ಯಾನೇನ್ಮಾಡಿಟ್ಟಿಧೀಯಾ ?

ವೆಂಕಮ್ಮ :—( ತಿಳಿಯದಹಾಗೆ ನಟಿಸಿ ) ಯಾವ್ವೊಡ್ವೆಗಳ್ವಿಷ್ಯಾ ?

ಸುಬ್ಬಮ್ಮ :—ಬೀಗಹಾಕಿಟ್ಟಿದ್ಧೀಯಾ ? ಚನ್ನಾಯ್ತು ! ಮದುವೇಗೆ. ಇನ್ನೆರ್ಡು ತಿಂಗ್ಳುಕೂಡ ಇಲ್ಲಾ ! ಈಗ್ಲೇ ಕೊಟ್ರೆತಾನೆ ಮಧ್ವೆ ಹೊತ್ಗೆ ಚಿಕ್ಕದ್ಮಾಡಿ ತರ್ಸ್ಬಹುದು ?

ವೆಂಕಮ್ಮ :—ಚಿಕ್ಕದ್ಮಾಡ್ಸೋದು ! ಯಾಕೋಕಾಣೆ ! ನೀವ್ಹೇಳೋದ್ ನನಗರ್ಥವಾಗ್ಲಿಲ್ಲ !

ಸುಬ್ಬಮ್ಮ :—( ಘಟ್ಟಿಯಾಗಿ ) ಯಾಕ್ಚಿಕ್ಕದ್ಮಾಡ್ಸೋದೇ ? ನಂಕೆಂಚೂ ಕುತ್ತಿಗ್ಗೆ ಕೈಗಳ್ಗೆ ಸರಿಹೋಗೋದಕ್ಕೆ…. …. ….ಆ ಹೊತ್ತೇ ಹೇಳ್ಲಿಲ್ವೇ ನಾನು-ನಿನ್ಗಂಡ್ನೆದುರ್ಗೇ ? ಅಕ್ಸಾಲೇನ್ ಕಸೂಂತಾ ?

ವೆಂಕಮ್ಮ :—ನನ್ನಿವೀಗ್ಬೇಳ್ಳಿಲ್ವೇನೊ-ಆ ಹೊತ್ಕೊಂದ್ವೇಳಿ ನಾನ್ಕಿವ್ಕೋ ಏನೋಕಾಣೆ….ಆದ್ರೆ ನನಗೀಗ್ಲೂ ಅರ್ಥವಾಗ್ಲಿಲ್ಲ-ನಿಂಕೆಂಚೂಗೂ-

ನಂ ಪುಟ್ಟಾನ್ತಾಇಗೂ ಒಡ್ವೆಗಳಿಗೂ ಇರೋ ಸಂಬಂಧ! ಕಿಟ್ಟೂಗೆ ಕೆಂಚೂನ್ತಂದ್ಕೊಂಡು ಮದ್ವೆ ಮಾಡ್ಕೊಳ್ಳೋದ್ನಿಮ್ಗಿಷ್ಟ ಆದ್ರೆ ಅವಳ್ಗಾಕ್ಕೊಂಡ್ ನಲ್ದಾಡೋಕೆ ನಂ ಪುಟ್ಟಾನ್ತಾಯಿ ಒಡವೆಗಳಲ್ಲೊಂದು ........ ತಿರುಪ್ನೇಕೂಡಾ ಪೆಟ್ಗೇಯಿಂದ್ಹೊರ ಕ್ಕೊಡೋದಿಲ್ಲ!....ಈ ಮಾತ್ಖಂಡಿತ!

**ಸುಬ್ಬಮ್ಮ**:—( hysterically ) ಖಂಡಿತ! ಖಂಡಿತ! ಇದ್ಯಾರು ಯಾರ್ಹತ್ರಾಡೋ ಮಾತು! ನೀ....

**ವೆಂಕಮ್ಮ**:—( ಅಡ್ಡಮಾತನಾಡಿ ) ಯಾರ್ಯಾರ್ಹತ್ರಾಡೋ ಮಾತೂಂತ ತಿಳಿದೇ ನನ್ಮೇಳ್ತೀರಾ! ಇಲ್ಲ ನನ್ನ ಈಹೊತ್ಕಣ್ಬಿಟ್ಟ ಹಸುಮಗೂಂತ ಹೆದ್ರಿಸಿ ಹೇಳ್ಕೊಡ್ತೀರಾ ನನಗೆ! ಪುಟ್ಟಾ ತಾಯಿಯಿಲ್ದ ಮಗು ವಾದಾಕ್ಷಣಕ್ಕೆ............ಹೇಳೋರ್ ಕೇಳೋರಿಲ್ಲಾಂತಂದ್ಕೊಂಡು ....ಅವಳ್ತಾಯಿ ವಡ್ವೆಗಳ್ನ ಯೋಗ್ಯತೆ ಇಲ್ದ ಬೀದೀಲ್ಹೋಗೋ ಚಿಳ್ಳೆ ಪಿಳ್ಳೆಗಳ್ಗೆಲ್ಲಾ ಬಾಚ್ಕೊಡೋದೆ?

**ಸುಬ್ಬಮ್ಮ**:—( ಚೀತ್ಕರಿಸುತ್ತಾ ) ಏನಂದೆ? ಯೋಗ್ತೆ ಇಲ್ದ ಚಿಳ್ಳೇಪಿಳ್ಳೇ ನೇನೇ ನಂಕೆಂಚೂ! ಅವಳ್ಯೋಗ್ತೆ, ಅಂತಸ್ತ್ನಲ್ಲಿ ಅರ್ಧವಾದ್ರೂ ನಿನ್ಗಿದ್ದಿದ್ರೆ....ದೊಡ್ಡೋರ್ಯೋಗ್ಯತೆ ಇಷ್ಟು ನಿರಾಕರಿಸ್ತಿದ್ದಿಯಾ ನೀನು?

**ವೆಂಕಮ್ಮ**:—( Superciliously ) ಹಾಗಷ್ಟ್ಯೋಗ್ತೆ—ಅಂತಸ್ತು ನಿಮ್ಕೆಂಚೂಗೆ ಇದ್ದಪಕ್ಷದಲ್ಲಿ ಅವರ್ಮನೇಯಿಂದ ದೊಡ್ ದೊಡ್

ನಗಗಳ್ನಾ ಕ್ಕೊಂಡ್ ಬಂದು....ನಿಗಿನಿಗಿನಿಗೀಂತ್ನಲೀಲಿ !........ ಯಾರುಬೇಡಾಂದ್ರು ? ! ನಂಪುಟ್ಟ ! ಪಾಪ ! ತಾಯಿಇಲ್ಲದ್ರೂಗೂ ! ಅವಳ ತಾಯಿಾ ಜ್ಞಾಪಕಕ್ಕಾದ್ರೂ ಇಟ್ಕೊಂಡಿರೋ ಒಂದೆರಡು ಒಡ್ವೇನ ಸುಲ್ಕೊಂಡದ್ರಿಂದ ಏನ್ಬಂದ್ಹಾಗಾಯ್ತು ನಿಂ ಕೆಂಚೂಗೆ ?

**ಸುಬ್ಬಮ್ಮ**:—ಈ ಮಹಾ ವೊಡ್ವೆಯಿಂದೇನ್ಬಂದ್ಹಾಗೂ ಆಗೋದಿಲ್ಲಾ ! ಆದ್ರೆ ಮನೆ ಒಡ್ವೆಗ್ಳು ಮನೇಲೇ ಇದ್ಬಾಳೋ ಸೊಸೇಗ್ ಕೊಡೋ ಸಂಪ್ರದಾಯ್ವೇಹೊರ್ತು .... .... .... ಮನೇಬಿಟ್ ಮಾವನ್ಮನೇಗ್ಹೋಗ್ಬಿಡೋ ಮಗಳಿಗಲ್ಲ ಕೊಡೋ ಪದ್ಧತಿ!

**ವೆಂಕಮ್ಮ**:—( With a sarcastic smile ) ನೀವ್ಹೇಳೋ ನ್ಯಾಯಾ — ಕುಟುಂಬ್ದಲ್ಲಿ — ವಂಶಪರಂಪರೆಯಾಗ್ಬಂದಿರೋ ಒಡ್ವೆಗಳ್ಮಾತು ! ಈಗ್ನಿಮ್ಮ ಚರ್ಜೀಗೆ ತಗಲ್ಕೊಂಡಿರೋ-ವಡ್ವೆಗ್ಳು— ಪುಟ್ಟನ್ತಾಯಿಾಗೆ—ಅವಳ್ತಂದೆ, ಗಂಡ, ಮಾವ ಇವ್ರೆಲ್ರೂ ಅವಳ್ಮೇಲಿನಾಶೇಗ್ಮಾಡ್ಸಾಕಿದ್ದು. ಅವು ತರುಪಾಗ್ಲೀ, ಹರಳಾಗ್ಲೀ ಹಿತ್ತಾಳೆಯಾಗ್ಲೀ, ಭಂಗಾರ್ವಾಗ್ಲೀ—ಟೊಳ್ಳಾಗ್ಲಿ, ಗಟ್ಟಿಆಗ್ಲೀ— ಹ್ಯಾಗಿದ್ರೂನೂವೆ, ಸಂತೋಷ್ದಿಂದ ತಾಯಿ ಜ್ಞಾಪಕಕ್ಕಾಕ್ಕೊಳ್ಳೋ ಮಗಳ್ದೇ ಹೊರ್ತು..ದುರ್ಬಿಣೀ ಹಾಕ್ನೋಡಿ..ಒರೆಗಲ್ನಲ್ಲಿ ತಿಕ್ನೋಡಿ .... .... .... ಅಂದಾಜ್ಹಾಕ್ನೋಡಿ ತೊಟ್ಕೊಂಡ್ಸುಳಿಯೋ ಸೊಸೆ ಸೌತಿಯದ್ದಲ್ಲ ! ಹಯ್ಯೋ ! ಹೀಗೆಲ್ಲಾ ನೀವೂ ನಾನೂ ಕಾದಾಡಿ ಪ್ರಯೋಜ್ನವೇನೂ ಇಲ್ಲಾಂದ್ರೆ........ಮನೇಲಿ ಯಜಮಾನ್ರೊಬ್ರಿ ರೋವಾಗ ! ಅವರಿಷ್ಟ ಹ್ಯಾಗೋ ಹಾಗಾಗುತ್ತೆ.

ಸುಬ್ಬಮ್ಮ :—ನಿನ್ಗಂಡನ್ಗೆ ಜಮಾನ್ಕೆ ಬೇರೆ ಬಾಕೀ ಇಟ್ಟಿದ್ದೀಯಾ ನೀನು ? ನೀನೀ ಮನೇ ಹೊಸಲ್ದಾಟಿದ ತಕ್ಷಣ್ವೇ.. ಏನ್ಮಾಂಕ್ಬಿಟ್ಟಿದೀ ತೂದ್ರ್ಯೋ ಕಾಣೆ.... ನೀನ್ಹೇಳ್ದಾಟ್ತಕ್ಕೆ ಬದಲ್ಹೇಳ್ದೆ ಬೆಪ್ಪಾಗೊಪ್ಕೊಳ್ತಾನೆ........ ನಿನ್ಮ್ಯೇಚ್ಗೆಗ್ಹೂ, ನಿನ್ಪಿತೂರಿಗ್ಹೂ ಎಲ್ಲಾ ನನಗ್ಗೊತ್ತಿಲ್ಲಾಂತಿ ಳ್ಕೊಂಡಿದ್ದೀಯೇನೊ ?.., ನಾ ಬೇಡಾ ಬೇಡಾಂತ್ಬಡುಕೊಂಡ್ರೂನೂ ಕಿಟ್ಕೊಗೆ ನಿಮ್ಮಅಣ್ಣಾನ್ಮಗಳ್ನ ತಂದ್ಕೊಂಡದ್ ನಿನ್ಕುತ್ರಿಮಾಂತ್ ನನಗ್ಗೊತ್ತಿಲ್ವೇನು ? ಇಷ್ಟಕ್ಕೂ ಆ ಮದ್ವೇ ಈ ಮನೇಲ್ಯಾರ್ಗೂ ಇಷ್ಟವೇ ಇಲ್ಲ ....

ವೆಂಕಮ್ಮ :—(ಅಡ್ಡಮಾತನಾಡಿ) ಅವಳ್ನ್ತಂದ್ಕೊಳ್ಳೋ ಇಷ್ಟವಲ್ವೇನೋ! .... .... ಅವಳ್ಕೊಟ್ಟತೇಲಿ .... .... ಈ ಮನೇ ಭೋಗ್ಯಾಬಿಡಿಸ್ಕೊ ಳ್ಳೋಕ್ ನಂಮಣ್ಕೊಟ್‌ಹಣ ಹುಳ್ಳಗಿರ್ಲಿಲ್ವಲ್ಲಾ ! ! ಈ ಮದ್ವೇ ತಾನೇ ಏನು ? .... .... .... ನಿಮಗ್ಕೆಂಚೂ ಮೇಲಿರೋ ಮಮ್ತೆ ವಿಶ್ವಾಸಗ್ಹೂ ನನಗ್ಗೊತ್ತಿಲ್ವೆ ? ಈಗ್ನಿಮ್ಮಗನ್ನಿರೋ ಸಾಲಾನ್ತೀರ್ಸೋಕೆ ಬೇಕಾದ ಹಣಾನ, ನಾಗಮ್ಮ ಕೆಂಚೂ ಹೆಗಲ್ಮೇಲ್ಹೇರ್ಸಿ ಹೊರ್ಸಿ ಕಳ್ಸೋದು .... .... ನಂಕೆಂಚು ! .... ನಂಕೆಂಚೂಂತ ! .... .... ಬಿಡ್ಕಾಸಿಲ್ದೆ ಬರೀಕೈಬೀಸ್ಕೊಂಡ್ಬರ್ಲೀ ಮನೇಗೇ .... .... ಆಗ್ಹೋದ್ತೇನೆ .... .... ( ಅಣಕಿಸುತ್ತಾ ) ನಂ ಕೆಂಚೂ ನಂ ಕೆಂಚೂ ಅಂತ ಕುಣ್ಯೋದ್ನ !

ಸುಬ್ಬಮ್ಮ :—( in a loud whisper ) ಸರಿ ! ಈ ಚಿತ್ರಾಂಗೀ ಜೊತೇಲ್ಜಚ್ಚೆ ಮಾಡೋಕ್ ಚರ್ಮದ ಬಾಯಿದ್ರೂ ಸಾಲ್ದು!

**ವೆಂಕಮ್ಮ**:—ಚಿತ್ರಾಂಗಿ !....ಸರಿ ! ನಾನೊಬ್ಬುಹುಚ್ಚು....ಹೆದ್ರುಕೊಂಡ್ ಬಿದ್ದಿದೇನಲ್ಲ, ಈ ಹಲ್ಬಿದ್ದ ಹದ್ದುಗಳ್ಗೆ ! ನನ್ನ ....

**ಸುಬ್ಬಮ್ಮ**:—ಹಲ್ಬಿದ್ದದ್ದೂ! ........ ಯಾರ್ನೀ ಹಲ್ಬಿದ್ದದ್ದೂಂತೀಯಾ? ಇನ್ನೀ ಮನೇಲ್ಯಾನ್ರ್ಯಾದೇ ಕಳ್ಕೊಳ್ಳೋಕಿಂತ್ಲೂ ಭಾವೀಲ್ಬಿದ್ರಾಸ್ ಯೋದ್ಮೇಲು—**ರಾಮೂ ! ರಾಮೂ !**

**ರಾಮಣ್ಣ** :—( ಒಳಗಿನಿಂದ ) **ಏನದು....ಬಂದೇ !**

**ವೆಂಕಮ್ಮ** :—ಬರ್‍ಲಿ ! ಬರ್‍ಲಿ ! ಬಂದೇನ್ಮಾಡತ್ರೊ, ನೋಡೋಣ !

**ರಾಮಣ್ಣ** :—( Precipitately ) ಓಹೋ! ಸರಿ! **ತಿರಿಗ್ಸಿರು** ಮಾಡ್ಬಿಟ್ರಾ ಜಗ್ಗಾನ....ಅತ್ತೇನೂ ಸೊಸೇನೂ! ಇದೇನ್ಮನೇನೋ ....ಇಲ್ಲ ...ಮಾರ್ಕಟ್ಟೋೀಕಾಣೆ....! ಈ ನಿಮ್ಮಗ್ಳ ತೀರ್‍ಸೋಕಾದ್ರೂ ಇನ್ನೊಂದವ್ತಾರಾನೆತ್ಬೇರ್ಡೆ ಜಗದೀಶ !....ಏನ್ಸಗಳ **ಇದು ?**

**ಸುಬ್ಬಮ್ಮ** :—( hysterically ) ಹಲ್ಬಿದ್ದದ್ದೂಂತ ಯಾರ್ನವಳಂದ ದ್ಕೇಳು .... ಕೇಳವಳ್ನ ....

**ವೆಂಕಮ್ಮ** :—ಪಿಶಾಚಿ .... .... ಚಿತ್ರಾಂಗೀಂತಂದ್ಹಾಗಿತ್ತು ಯಾರೋ .... ಅವರ್ನ ನಾನಂದದ್ದೂ .... .... ( ಒಳೆದು ) ಹಲ್ಲು—ಬಿದ್ದ— ಹದ್ದೂಂತ .... ....

**ಸುಬ್ಬಮ್ಮ**:—ನೋಡ್ದ್ಯಾ ಕೃತಿಗೂನೂ ನಿನ್ನೆದ್ರಿಗೇ ಬೈತಾಳೆ .... ನಾನಿನ್ನೀ ಮನೇಲಿರೋದಿಲ್ಲ .... .... .... ಎಲ್ಲಾದ್ರೂ ದೇಶಾಂತ್ರಕ್ಕೋರ ಟ್ಹೋಗಿ ಪ್ರಾಣಗಳ್ನ ಕಳ್ಕೋತೇನೆ .... ....

**ರಾಮಣ್ಣ** :— (Loudly) **ಲೇ.... ದೊಡ್ಡೋರ್ನ.... ಹಾಗನ್ಬಹು ದೇನೆ** ?....ಏನೇ........ದೊಡ್ಡೋರ್ನ....ಹಾಗನ್ಬಹುದೇನೆ ........ (Then meekly gesticulating) ಲೇ ಹಾಗನ್ಬಹು ದೇನೆ....ದೊಡ್ಡೋರ್ನ ?

**ವೆಂಕಮ್ಮ** :— ಸರಿ ! ಸೇರ್ಬಿಟ್ರಾ ನೀವೂನೂ ! ಈ ಮನೇಲಿನ್ನೇನ್ಕೆಲ್ಸ ನಂಗೆ....ಬದ್ಕಿ ! ಬದ್ಕಿ ! ನೆಮ್ದಿಯಾಗಿ ಬದ್ಕಿ ! ತಾಯಿೊನೂ.... ಮಗ್ನೂ. ....ಬೋರಾ ! ನನ್ಟ್ರಂಕ್ನೂ ಹಾಸ್ಗೇನೂ ಹೊರಗ್ಜಗ್ಲೀ ಮೇಲಿಟ್ಟು ಒಂದ್ಜಟ್ಕಾನ ಹೊಡ್ಕೊಂಬಾರೋ !

[ ಬೋರನು ಬಂದು ಹೋಗುವನು ]

**ರಾಮಣ್ಣ** :— ಹಯ್ಯಯ್ಯೋ....ನೀನೆಲ್ಹೋಗ್ತೀಯೇ ನನ್ಬಿಟ್ಬಿಟ್ಟೂ....?

**ವೆಂಕಮ್ಮ** :— ಬೇರೆಲ್ಲಿಗೆ ?....ನಂಮನೇಗೆ !....ಏನ್ಗತೀಕೆಟ್ನೆಮ್ಮನೇಗ್ಬಂದೇ ನ್ನಿ್ತ್ಕೊಂಡ್ರೇನು....?

**ರಾಮಣ್ಣ** :— ಹಯ್ಯಯ್ಯೋ ನೀನ್ಯಾಕೇ ಹೋಗ್ಬೇಕೀಗ ?

**ವೆಂಕಮ್ಮ** :— ಹೋಗ್ದೇ ಬೇರೇನಿಧೆ ಈ ಮನೇಲ್ನನ್ಗೆ?....ನಿಮ್ಮನ್ನ ಮದ್ವೇ ಯಾಗ್ಬಂದಾಕ್ಷಣ....ಇವರ್ಮನೇಲಿರೊ ಮುದಿಗೂಬೆಗ್ಳ ಬೈಗಳ್ಕೇ ಳ್ಕೊಂಡ್ಬಿದ್ದಿರ್ಬೇಕೂಂತ್ಬರ್ದಿದೆಯೇ ನನ್ಹಣೇಲಿ? ಅದ್ರಲ್ಲೂ ಲಾಯ್ರುಂತೆ ಇದು! ಒಳ್ಳೇ ಲಾಯ್ರು! ಒಂದ್ಮಾತು........ ಒಂದ್ಚರ್ಚೆ...........ಒಂದ್ಸಂವಾದ...........ಒಂದ್ವಾಗ್ವಾದಾ ಜರ ಗ್ತೂಂದ್ರೆ, ಏನು ? ಎತ್ತ ? ಯಾರೇನ್ಹೇಳಿದ್ರು ? ಮಾತೆತ್ಕಡೆ ? ನ್ಯಾಯ್ವೆತ್ಕಡೇಂತ ವಿಚಾರಿಸ್ದೇ ಕೋಣೇಶ್ವರನ್ಹಾಗೆ ಕೊನೇ

ಗ್ನುಗ್ಗಿ, ಈ ಕಣ್ಣಿಂಗಿದ್ಕಪ್ಪೋತದ ಕಿರ್ಲಾಟಿಕ್ ಕಿವಿಕೊಟ್ಕೊಂಡ್ರೆ, ಮೇಲ್ಬೀಳೋ ಮಂಕ್ಮುಚ್ಚೀ ಗಂಡ್ಸು, ಲಾಯ್ರಿ ಕೆಲ್ಸ ಬೇರೆ ಮಾಡ ತ್ರಂತೆ?....ಲಾಯ್ರಿಕೆಲ್ಸ!

**ರಾಮಣ್ಣ** :—ಹಯ್ಯೋ! ಯೆಲ್ಲಾ ವಿಚಾರಿಸ್ತೇನೇ! ನಿನ್ಕೋಪಾನ್ ಸ್ವಲ್ಪ ಅಡಗಿಸಿಕೊಳ್ಳೀ....ವಿಚಾರ್ಸಿ ಎಲ್ಲಾ ಫೈಸಲ್ ಮಾಡ್ತೇನೆ! (aside) ಒಳ್ಳೇ ಮರಣ ಸಂಕ್ಟ ಇದು! (to Bora who is bringing the trunk and bed) **ಲೋ! ತಿರಿಗೊಳಕ್ತಕ್ಕೊಂಡ್ಹೋಗೋ ಮಂಕು!**

**ವೆಂಕಮ್ಮ** :—(to Bora) ಹೊರಗಿಡೋ ಹುಚ್ಚು!

**ಬೋರ** :— (aside) ಒಳ್ಳೇ ಕಾಟಕ್ತಗಲ್ಕೊಂಡ್ನಲ್ಲಾ! ಒಳ್ಗಿಟ್ರೂ ಜಗ್ಳ! ಒರಗಿಟ್ರೂ ಜಗ್ಳ! ಸರಿ! ನರಸಿಂದೇವ್ರಿಟ್ಟಾಂಗೆ ಒಸಲ್ಮೇಲಿಟ್‌ಬಿಡ್ತೇನೀ ಕಾಣಪ್ಪ; (Placing the trunk and the bed on the door step) ನಮ್ಮ ನೇಲಿ ನಮ್ಮಪ್ಪನ ಬೈದ್ಗೀದ್ರೊ ನನ್ಹೆಂಡ್ರು............ಅಪ್ಪಳ್ಸಿ ಬಿಡ್ತಿದ್ದೆ ನನ್ಹೆಂಡ್ರನಾ........ಈ ಮನೆಗ್ಳಾಗ್ನ್ಯಾಯ ಅಂಗಲ್ಲ. ಕಾಪೀ ಕುಡ್ಯೋದು........ಕಾದಾಡೋದು........ಕಾದಾಡೋದು ........ಕಾಪೀ ಕುಡ್ಯೋದು.

**ರಾಮಣ್ಣ**:— ಲೇ....ವಿಚಾರ್ಸಿ ನಿನ್ನಿಷ್ಟದ್ಪ್ರಕಾರ ಫೈಸಲ್ಮಾಡ್ತೇನೇಂತ್ಹಾ ತ್ಕೊಟ್ಮೇಲಿನ್ನೂ ಕೋಪ್ವೇನೆ ನಿನ್ಗೆ?

**ವೆಂಕಮ್ಮ**:— (Coyly) ಹಾಗಾದರೆ ಹೋಗಿ....ವಿಚಾರ್ಸಿ........ಏನು ಫೈಸಲ್ಮಾಡ್ತೀರೋ....ನೋಡ್ಬಿಟ್ಹೋಗ್ತೇನದ್ನೂನು!

**ರಾಮಣ್ಣ** :— (approaching his mother) ಅಮ್ಮ! ಯಾವ ಮಾತಿನ್ಮೇಲಮ್ಮ ಹುಟ್ಟಿದ್ದೀಜಗ್ಳ? ಜಗಳ್ವೇನು.... ವಾಗ್ವಾದಾ.... ಅಲ್ಲಾ.... ಸಂಭಾಷ್ಣೆ ?

**ಸುಬ್ಬಮ್ಮ**:— ನಂಗೂ ಅವಳಿಗೂ ಯಾವಾಗ್ಲೂ ಜಗಳ ಯಾವ್ಮಾತಿನ್ಮೇಲೆ ಷುರುವಾಗೋದು ?—ಈ ಮನೇ ಹಾಳಾಗಿ ಅವಳಿಂದ ಕಾಡ್ಪಾ ಲಾಗೋ ಮಾತಿನ್ಮೇಲೆ— ಈವತ್ತಿನ್ನ್ಯಾದಾಟ ಕಿಟ್ಟೂ ಹೆಂಡ್ತಿ ಒಡ್ವೆಗಳ್ಮೇಲ್ಬಂದದ್ದು ..........ಚಿಕ್ಕದ್ಮಾಡಿ ಕೆಂಚೂ ಬಂದಾಗ ಅವಳ್ಕೈಗೂ ಕುತ್ತಿಗ್ಗೂ ಸರಿಮಾಡಿಟ್ಟಿರೋದೂಂತ ಅವತ್ತೇ ಒಪ್ಕೊಂಡ್ಯೆಲ್ವೇ ನೀನೂ ?

**ರಾಮಣ್ಣ** :— ಹೌದೂ ?

**ಸುಬ್ಬಮ್ಮ**:— ಈಗ್ಕೇಳವಳ್ನ....ಆ ಒಡವೆಗಳ್ನ ಕೆಂಚೂಕ್ಕೊಡೋದಾದ್ರೆ ಒಂದ್ತಿರುಪ್ಪೀ ಕೂಡಾ ಹೊರಕ್ಹೊಡ್ಡೋದಿಲ್ವಂತೆ................ ಪುಟ್ಟಾ........

**ರಾಮಣ್ಣ** :— ನಂಪುಟ್ಟಾ............?

**ಸುಬ್ಬಮ್ಮ**:— ನಂಪುಟ್ಟಾ ಹೌದು—ಆದ್ರೆ ಮರೀಬೇಡ—ನಿನ್ಹೆಂಡ್ತಿ ಅಣ್ಣ ನ್ಮೊಮ್ಮಗಳೂ ಹೌದೂ. ಪುಟ್ಟಾಗೆ ಅವಳ್ಮಾಯಿ ಒಡ್ವೆ ಅವ ಳಿಗೇ ಇಟ್ಬಿರ್ಬೇಕಂತೇ........ಇದರರ್ಥ ನಿನಗ್ಗೊತ್ತಿಲ್ವಲ್ಲಾ........

ಹೇಳ್ತೀನ್ಕೇಳು. ಇವಳಿಗೆ ನಾವು ನಂಕೆಂಚುನ್ತ್ಂಡ್ಕೊಳ್ಳೋ ದ್ರಲ್ಲಿ ವೊಟ್ಟೊದ್ಲೇ ಇಷ್ಟಿಲ್ಲಾ........ಈ ಒಡ್ವೆಗಳ್ನೆಲ್ಲಾ ಹೀಗೇ ಇಟ್ಕೊಂಡಿದ್ದು............ನಂಪುಟ್ಟಾನ............ಅವಳಕ್ಕನ್ಮಗನಿಗೆ ತಂದ್ಕೊಂಡು....ಆ ಒಡ್ವೆಗಳ್ನೂ........ನಂಮನೇನೂ ನುಂಕೊಂ ಡ್ಹೋಗ್ಬೇಕೂಂತ್ಬಂದಿರೋ ಮಾರಿ, ಇವಳು! ನಾನೋ....ಈವ ತ್ತಿದ್ದು ನಾಳೇ ಸಾಯೋ ಮುದ್ಕಿ....ಭದ್ರು! ಭದ್ರ! ಭದ್ರ! ಅವಳೋ ನಂಕುಟುಂಬಕ್ಕಿಚ್ಚಿಟ್ಟಿಟ್ಹೋಗೋಕ್ಬಂದಿರೋ ಕುಲಕಳಂಕಿ!........ ಜೋಕೆ! ಜೋಕೆ!! ಜೋಕೆ!!! ನಿನಗ್ಗಂಡಸ್ತನಾ ಏನಾದ್ರೂ ಅವಳು ಅಲ್ಪ ಸ್ವಲ್ಪ ಬಾಕೀಗೀಕೀ ಇಟ್ಟಿರೋ ಪಕ್ಷದಲ್ಲಿ............ ಈ ಕ್ಷಣವೇ ಆ ಒಡ್ವೆಗಳನ್ನ ಹೊರಕ್ತೆಗ್ದು.........ಚಿಕ್ಕದ್ಮಾಡ್ಸಿ.... ಕೆಂಚೂ ಕೈಗ್ಹಾಕ್ಬಿಟ್ಟು........ ಆಮೇಲೇಳೂಟಕ್ಕೆ!

**ರಾಮಣ್ಣ** :—My God!........This is serious....!....

**ವೆಂಕಮ್ಮ**:— ಸರಿ....ಇವರ ಮೈಗಾಡೂ, ಮುಖಸಪ್ಪಗ್ಮಾಡ್ಕೊಂಡು serious ಅಂಬೋ ಸೂಚ್ನೇನೂ ನನಗ್ಗೊತ್ತಿಲ್ವೆ? ಸೇರ್ಬಿಟ್ರೆ ತ್ಕಡೆ! ಅಬ್ಬ!....ಹಣ, ಒಡ್ವೆಗಳಿರ್ಲಿ! ಒಂದ್ಕಾಸು....ಒಂದ್ಬಿಡ್ಕಾ ಸಿನ್ನಾಭಾಯೆತ್ಕಡೇನೋ ಅತ್ಕಡೇ ಸೇರ್ಬಿಡೋದು, ಮಾನ ಮರ್ಯಾದೆ ಮತಾಕೂಡಾಬಿಟ್ಬಿಟ್ಟು! ಈಗೀಮುದ್ಕೀ ಮಾತ್ಕೇಳ್ಕೊಂಡು ಒಡ್ವೆ ಗಳ್ನ ಹೊರಗೆ ತೆಗೆದಿಡೂಂದ್ರೆ ಏನ್ಮಾಡೋದೂ?....ಸರಿ!....ನಾನೂ ಅದೇ ತಂತೀನ್ಮೀಟಿದ್ರೆ ತಾನೇ ತಿರಿಗ್ಬರ್ತಾರೆ ಹದಕ್ಕೆ........! ........... (looking coyly) ಇಲ್ಬನ್ನೀಂದ್ರೆ!

( Ramanna approaches Venkamma )

**ವೆಂಕಮ್ಮ** :-- (in an irritatingly low tone) ಏನು ! ಯಾರನ್ ಬೆದರಿಸ್ತೀರಿ? ನ್ನಾನ್ನುಚ್ಚೀಂತ ತಿಳ್ಕೊಂಡ್ರಾ?....ಇಲ್ಲ ನೀವ್ಹುಚ್ಚಿ?....ಈಗ ಈಮನೇಗೆ ನೀವೂ ನಾನೂ ಶಾಶ್ವತವೋ ? ಇಲ್ಲಾ "ಈ ಹೊತ್ತಿದ್ದು....ನಾಳೇ ಸಾಯೋ ಮುದ್ಕೀ ನಾನೂ"ಂತ ತಾನೇ ಒಪ್ಕೊಳ್ಳೊ ಆ ಮುದ್ಕೀ ಶಾಶ್ವತ್ವೋ ! ಈಗೇನ್ನಿಮ್ಮ ನಾಗತ್ತೆ ಗತಿಗೆಟ್ಟಿರೋದು,....ಅವರ್ಕೆಂಚೂ ಒಡ್ವೆಯೋಚ್ನೆ ನಾವ್ಮಾಡ್ಬೇಕಾದ್ದಕ್ಕೆ? ಇಲ್ಲಿರೋ ಕಾಲ್ಕತ್ರಿಬಾವ್ಲಿ ಅರ್ಧ ಅಂದಿಲು ಮುಕ್ಕಾಲ್ ಮೂಗ್ತಿ ನಾವೇ ಹಾಕ್ಕೋತೇವೇಂದ್ರೆ ನಿಮ್ಯೋಗ್ಯತೆ ಪ್ರಕಾರ ಹಾಕ್ಕೊಳ್ಳಿ ಒಡ್ವೆಗಳ್ನಾಂತ ಕೋಪಿಸಿಕೊಂಡು ತೆಪ್ಪನೆ ಇದ್ಬಿಡ್ತಾಳೆ ! ಈ ಮನೆ ನಾಲಾತೀಸ್ರೋ ಯೋಚ್ನೇಲಿರೋ ನಮ್ಕೈಲಿ ಸದ್ಯ ಒಡ್ವೆ ಮಾಡ್ಸೋದೆಲ್ಲಾಗುತ್ತೆ ? ನಮ್ ಮನೇಲಿರೋ ವಡ್ವೆ ಅಷ್ಟ್ರಲ್ಲೇ ಇಧೆ....ಇರೋ ಅಲ್ಪ ಸ್ವಲ್ಪ, ಪುಟ್ಟಾನ್ತಾಯಿಯಾದು ಪುಟ್ಟಾಗೇಂತ ಇಟ್ಟಿದೇವೇ ಅಂದ್ರೆ....ಲಕ್ಷಾಧಿಕಾರಿ ಅವ್ರು ;....ಅವಳಮುದ್ಕಗೂ ಕೆಂಚೂ;... ಅವರ್ಮನೇ ಕೊನೇ ಮದ್ವೆ ಇದು ; ಕೆಂಚೂ ಮುಖ ಮೈ ಕೈ ತುಂಬಾ ಒಡ್ವೆಗಳ್ನ ಆ ಯೋಗ್ಯತೆಪ್ರಕಾರ ಹೊರಿಸ್ಕಳಿಸ್ತಾಳೆ. ನಮ್ಮನೇಗ್ ಆ ಒಡ್ವೆಗ್ಳೂ ಆಯ್ತು ! ಈಗಿರೋ ಒಡ್ವೆಗ್ಳೂ ಆಯ್ತು ! ಹೀಗ್ನಮ್ಮನೇಗೊಂದಕ್ಕೆ ಎರಡ್ಸೆಟ್ಟು ಒಡ್ವೆ ಇದ್ರೆ ಒಗರೇನು.? ಮನೇಗೆ ಮುಂದಕ್ಕೆ ಯಾವದ್ದಾ ಭಾಂಬೋ ಮುಂದ್ಯೋಚ್ನೆ ಇಲ್ದೆ ಮಾತಾಡೋ ಮುದಿಗೂಬೇ ಮಾತುಗಳಿಗೊಪ್ಕೊಂಡು

ನಿಂತಿಧೀರಲ್ಲಾ ನಾನೂ ಒಬ್ಗಂಡ್ಸೂಂತ!........ಅದಲ್ಲೇ ನನಗಾಶ್ಚರ್ಯ!!

ರಾಮಣ್ಣ :— ಮನೇಗೆ two sets of jewelsoo! (face lights up). ಲೇ! ನಿನ್ Logicಊ Cogent ಆಗಿಧೆಯೇ!

ವೆಂಕಮ್ಮ :— ( Smiling aside ) ಜುಟ್ಟಿಕ್ಕಿರೋವಾಗ್ಲೆ ಜಗ್ಗಿಸಿ ಬಿಡಬೇಕು! ( ಪ್ರಕಾಶ ) ಕೋಜೆಂಟೋ ಗೀಜೆಂಟೋ, ಆದಿಲ್ಲೇಳೀ ಪ್ರಯೋಜ್ನ! ಅಲ್ಹೋಗ್ಧಿದರ್ದೆಹೇಳಿ....ಮಾತೂ ಚರ್ಚೆ ಇಷ್ಟಕ್ಸಾಕೂ........ಇನ್ಮಾಚಿಸ್ತೀ ಮಾತಾಡಿದ್ರೆ ಆಕೆ ವ್ಯೆಗೆ ಆಗೋದಿಲ್ಲಾಂತ ಹೇಳಿ!

ರಾಮಣ್ಣ :—ಅವ್ಳೋಪ್ಪಲ್ಲಿಧಾಳೆಯೋ!! ಅದೆಲ್ಲಾ diplomatic ಆಗಿ ನಿಲ್ಲಿಸ್ತೇನೆ!....ಲೇ!

ವೆಂಕಮ್ಮ :— ಈಗೇನ್ಬಂತು?!

ರಾಮಣ್ಣ :—ಈಗ್ಲಾದ್ರೂ ನಿನ್ಬಂಕೂ ಹಾಸ್ಗೇ ತಿರಿಗೊಳಕ್ಹೋಗ್ ಬಹುದೇನೆ?

ವೆಂಕಮ್ಮ :— (looking fascinatingly at him) ಹೂಂ!

ರಾಮಣ್ಣ :— (to Bora) ಒಳಗಿಡೋ ತೆಗೆದೂ!

(Bora does not move)

ರಾಮಣ್ಣ :— (appealingly to Venkamma) ಲೇ....!

**ವೆಂಕಮ್ಮ**:—(to Bora) ತಗೊಂಡ್ಹೋಗೋ ತಿರಿಗೊಳ್ಳಿ !

**ಬೋರ**:—(taking things back) ಈ ಮನೇ ಚೀಪ್ಪೋರ್ಟ್ವೇ ಳೋವಗರ್ೂ ಕದ್ಲೋಕಾಗಾಕಿಲ್ಲ ಒಂದೆಜ್ಜೇನೂ. (Exit)

**ರಾಮಣ್ಣ**:—(aside) ಈಗಮ್ಮನ್ನ approach ಮಾಡೋದ್ಹ್ಯಾಗೆ ? ಈಗವಳ disposition ನೋ chronically choleric ........ (ಕ್ಷಣಮಾತ್ರ ಯೋಚಿಸುವನು) ........ಸರಿ....ಗೊತ್ತೇ ಇದೆ; Last resourceಉ............religion............ philosophy........good old platitudesಊ........ ........(approaching Subbamma gradually) ಅಮ್ಮಾ !........ ...ಈ ಪ್ರಪಂಚದಲ್ಲಿರೋ ಸಮಸ್ತ ಚರಾಚರ ವಸ್ತುಗ್ಳೂ ನಶ್ವರವಾಗಿರೋವಾಗ....ಈ ಕೇವಲ ರಕ್ತಮಾಂಸ ಮಯವಾದ ಈ ಮನುಷ್ಯದೇಹಾಂಬೋ ಈ ಮೃತ್ಪಿಂಡದಲ್ಲಿ ಸ್ಥಿರಾಭಿಮಾನಾನಿಟ್ಕೊಂಡು .... ಹೀಗೆ .... ಮನೆ .... ಬಾಕ್ಲು.... ಒಡ್ವೆ .... ಯಜಮಾನಿಕೆ .... ಬಿಡ್ಡಾಸೂಂತ, .... ವಯಸ್ಕರೂ ಜ್ಞಾನಿಗ್ಳೂ ಆದ ನಾವು ಮಕ್ಳ್ಳಗೆ ಕಾದಾಡೋದು ಉಚಿತ್ವೇ ನಮ್ಮಾ....?

**ಸುಬ್ಬಮ್ಮ**:—( Opens her mouth wide ; dumb-struck for a while) **ಇದೇನ್ಪಂತೀಗ** !

**ರಾಮಣ್ಣ**:—ಏನೋ ಆ ಸರ್ವಲೋಕೈಕನಾಥ ಕೊಟ್ಟ ಅಲ್ಪ ಸ್ವಲ್ಪ ವಯಸ್ನ ಭಗವಧ್ಯಾನ್ದಲ್ಲಿ ಕಳೆದು ಕಾಲಕ್ರಮೇಣ

to Venkamma) ಅಲ್ನಿಂತಿಧಾಳ್ನೋಡು, ಆ ಮಾರಿ ! .... .... ಇನ್ನಿದಕ್ಕೇಲೆ ನಿನ್ಸಂಸಾರ್ದ ಗೋಜಿಗೆ ನಾ ಬಂದ್ರೆ ಕೇಳು .... ( holding both hands aloft ) ಗಂಡು ಮಕ್ಕಳ್ನ ಹೆರೋ ತಾಯಿಗ್ಳ ಹಣೇಬರ್ಹವೆಲ್ಲ ಹೀಗೆ .... ಹೊಟ್ಟೇಲ್ಹುಟ್ಟಿದ್ಮಕ್ಳಿಂದ ಇದೇ ಅವಂಗ್ಸಲ! (ಗದ್ಗದ ಸ್ವರದಿಂದ) ಒಂಭತ್ತಿಂಗ್ಳು ಹೊತ್ತು .... .... ಹೆತ್ತು ಎದೆ ಹಾಲ್ಕೊಟ್ಟು .... .... ತನ್ಪ್ರಾಣ್ಕಕಿಂತ್ಲೂ ಜಾಸ್ತಿ ಆಶೆ ಇಟ್ಕೊಂಡು . .... ಸಾಕೋದು ! ಯಾಕೆ ? ಯಾಕೆ? ಅವರ್ದೊಡ್ಡೋರಾಗುತ್ಲೂನೂ ಇಂಥ ( pointing to Venkamma ) ಅಣ್ಣಮ್ಮಗಳಿಗಾಹುತಿ ಅರ್ಪ್ಸೋಕೆ! ಇನ್ನಾಕ್ಷನಗೀ ಇಹಲೋಕದ್ಸಲಗ್ಳೂ ! .... .... .... .... ....

(ವಕ್ರವಾಗಿ ಗೋಳಾಡುವಳು)

(ಒಳಗೆ— **ಯಜಮಾನ್ರಿಧಾರೆಯೇ ಮನೇಲಿ ? )**

**ವೆಂಕಮ್ಮ**:—( looking at the door ) ಯಾರೋ ಬಂದ್ಹಾಗಿದೆ! ( to husband ) ಹಯ್ಯೋ ! ಇನ್ನೀ ಪ್ರಲಾಪಸಾಕು, ಅಡಗಿಸ್ಕೋ ಅನ್ನೀಂದ್ರೇ ! .... ಇದೇನ್ನಾಚಿಗ್ಕೇಡು ! ಮನೇಗ್ಬಂದಿರೋವ್ರೇನ್ತಿಳ್ಕೊಂಡಾರು ? ಯಾರಾದರೂ ಸತ್ತರೂಂದ್ಕೊಂಡಾರು !

**ಸುಬ್ಬಮ್ಮ**:— ಅಂದ್ಕೊಳ್ಳೀ ! ಇಲ್ಲದ್ದೇನಂದ್ಕೊಂಡಾರೂ - ನನಗಿನ್ನೀ ಮನೇಲೆಲ್ರೂ ಸತ್ಹಾಗ್ತಾನೇ....

[ಒಳಗೆ—ರಾಮಣ್ಣೋರಿಧಾರೇನು, ಯಜಮಾನ್ರೂ ! ಯಜಮಾನ್ರಿ ಧಾರೇನು, ರಾಮಣ್ಣೋರು? ]

ಸುಬ್ಬಮ್ಮ:— ಯಾರೋ ಕಾಣೆ – ಬಡ್ಕೋತಿಧಾನೆ ಬಾಕ್ಲಲ್ಲಿ ........ ಯಜ್ಮಾನ್ರು .... ರಾಮಣ್ಣೋರು ! ರಾ ಮ ಣ್ಣೋ ರು .... ಯಜ್ಮಾನ್ರೂಂತ .... .... ಯಾರೋ ಕಾಣೆ ........ ಈ ಮನೇ ಗುಟ್ಟವನಿಗೆ ಗೊತ್ತಿಲ್ಲ ! ಪಾಪ ! ಈ ಯ ಜ ಮಾ ನ್ನೆ ಆ ರಾಮಣ್ಣಾಂದೂಂತ ತಿಳ್ಕೊಂಡಿಧಾನೇ ಆ ಮೂಢ !....ಸರಿ ! ಆಫೀಸ್ರೂಮ್ಗೆ ಎಳ್ಕೊಂಡ್ಹೋಗಿ ಕುರ್ಚಿ ಮೇ ಲ್ಕೂ ಡ್ಸೀ — ಬೋಳ್ಸದ್ಧಿನ್ಮೇಸೇನವಳ ತುಟೀಗ್ಳಗಲ್ಸೀ ( ವೆಂಕಮ್ಮನನ್ನು ಸೂಚಿಸಿ) ತೋರ್ಸು ! ಮನೇ ಯಜಮಾನ್ರನ್ನ ! ಮೂಢಾ ! ಮೂಢಾ !

[ ತೆರೆ ]



Printed by B. S. Venkataram at Deshabandhu Press.
Fort, Bangalore City.

ಪ್ರತಿಯೊಬ್ಬ ಸ್ಕೌಟೂ

ತಪ್ಪದೇ

ಓದಬೇಕಾದ ಪುಸ್ತಕ

# “ಹೋಲೀ ಕಿಟ್ಟೀ”

ಬೆಲೆ ರೂ. ೧-೧೨-೦

ಪ್ರಕಾಶಕರು :

ಮಾಧವ - ಸನ್ಸ್

(ಕೊಡಗಿ ಬಿಲ್ಡಿಂಗ್ಸ್)

ಗುಂಡೋಪಂತರ ಬೀದಿ — — ಬೆಂಗಳೂರು ನಗರ.